


ರೂ. ೧-೧೦

ಡಾ|| ಎಸ್. ರಾಧಾಕೃಷ್ಣನ್

# ಮತಧರ್ಮದ ಪುನರುಜ್ಜೀವನ




ಚೇತನ ಪುಸ್ತಕಾಲಯ
ಮೈಸೂರು

# ಮತ ಧರ್ಮದ ಪುನರುಜ್ಜೀವನ

ಲೇಖಕರು

**ಡಾ॥ ಎಸ್. ರಾಧಾಕೃಷ್ಣನ್**

ಅನುವಾದಕರು

**ಪ್ರೊ॥ ಎಂ. ಎ. ಯಾಮುನಾಚಾರ್ಯ**

ಪ್ರಕಾಶಕರು

ಚೇತನ ಪುಸ್ತಕಾಲಯ

ಮೈಸೂರು

*Mathadharmada Punarujeevana*
(RECOVERY OF FAITH)

ORIGINAL IN ENGLISH :

*BY*

**DR. S. RADHAKRISHNAN**





*Translated by* : **SHRI YAMUNACHARYA**
*Retd. Prof. of Philosophy, Mysore University*

Kannada Edition : December 1959
(3,000 copies)

PUBLISHED UNDER THE AUSPICES OF
THE SOUTHERN LANGUAGES BOOK TRUST
KANNADA : 32

Price : Rs. 1.10

PUBLISHED EY :

**CHETANA PUSTAKALAYA**

**Lakshmi Vilas Road : : Mysore**



Printed by G. H. Rama Rao
at Mysore Printing & Publishing House, Mysore.

# ಆಮುಖ

ಸಾಧಾರಣ ಜನತೆಗೆ ರುಚಿಸಲೂ ಬೇಕು, ನಿಜವಾಗಿ ಬೆಲೆ ಬಾಳುವಂಥದೂ ಆಗ ಬೇಕು, ಇಂಥ ಪುಸ್ತಕಗಳ ವಿಷಯದಲ್ಲಿ ತಮಗೆ ಈಗಾಗಲೇ ಆದ ಅನುಭವದಿಂದ ದಕ್ಷಿಣ ಭಾರತ ಪುಸ್ತಕ ಸಂಸ್ಥೆಯವರು ತಮ್ಮ ಎರಡನೆಯ ಪುಸ್ತಕ ಗುಚ್ಛವನ್ನು ದಕ್ಷಿಣದ ಎಲ್ಲಾ ಭಾಷೆಗಳಲ್ಲೂ ಪ್ರಕಟಿಸಲಿದಾರೆ. ಬಗೆಬಗೆಯ ಗುಂಪಿನ ಓದುಗರ ಭಿನ್ನ ಭಿನ್ನ ರುಚಿಗೆ ತಕ್ಕಂತೆ ಬಹಳ ಎಚ್ಚರಿಕೆಯಿಂದ ಪುಸ್ತಕಗಳನ್ನು ಆರಿಸಿದಾರೆ. ಸಹಜವಾಗಿಯೇ ಜೀವನದ ನಾನಾ ಮುಖಗಳ ಬಗ್ಗೆ ವಿಚಾರ ತಿಳಿಸುವ ಪುಸ್ತಕಗಳನ್ನು ಆರಿಸಿದಾರೆ. ಭಾರತದ ನಾಯಕಮಣಿಗಳ ಜೀವನವನ್ನು ತಿಳಿಸುವ ಗ್ರಂಥಗಳೂ ಇವೆ. ದೇಶದ ಹಿತಕ್ಕಾಗಿ, ಜನತೆಯ ಮೂಲಭೂತ ಹಕ್ಕುಗಳಿಗಾಗಿ, ದೇಶದ ಪ್ರತಿಷ್ಠೆ ಪ್ರಭಾವಗಳನ್ನು ಹೆಚ್ಚಿಸಲಿಕ್ಕಾಗಿ ಹೊಡೆದಾಡಿದ ಆ ನಾಯಕರಿಗೆ ತಾವು ಎಷ್ಟು ಋಣಿ ಗಳೋ ಮುಂದಿನ ಪೀಳಿಗೆಯವರು ತಿಳಿದುಕೊಳ್ಳುವುದು ಒಳ್ಳೆಯದು.

ಈ ಮಾಲೆಯಲ್ಲಿ ತತ್ವಶಾಸ್ತ್ರ, ಧರ್ಮ, ವಿಜ್ಞಾನ, ಪ್ರಾಚೀನೇತಿಹಾಸ, ಅರ್ಥ ಶಾಸ್ತ್ರಗಳೂ ಇವೆ. ಕಥಾಸಾಹಿತ್ಯಕ್ಕೆ, ಪ್ರಾಚೀನ ಕಲೆಗಳ ಪ್ರಚಾರಕ್ಕೆ ಎಡೆಯಿದೆ. ಅಭಿನಯ ಕಲೆ, ಶಿಲ್ಪಶಾಸ್ತ್ರ, ಪ್ರಾಚೀನ ಅವಶೇಷಗಳ ಸಂಶೋಧನೆ, ಎಲ್ಲ ಕಾಲಕ್ಕೂ ಅದ್ಭುತವೆನಿಸುವ ದಕ್ಷಿಣ ಭಾರತದ ಮಹಾ ದೇವಾಲಯಗಳ ವಿಷಯ, ಎಲ್ಲವೂ ಇವೆ. ಈ ಗೊಂಚಲು ಜನರಿಗೆ ಅಧ್ಯಯನಕ್ಕೆ ನಾನಾ ವಿಷಯಗಳನ್ನು ಒದಗಿಸಿ, ಇಂಥ ಗ್ರಂಥರಾಶಿಯನ್ನು ಹೆಚ್ಚು ಹೆಚ್ಚು ಜನ ಓದುವಂತೆ ಮಾಡುವುದರಲ್ಲಿ ಸಂದೇಹವಿಲ್ಲ.

ಈ ಕೆಲಸದಲ್ಲಿ ಒಂದು ಪ್ರಶಂಸನೀಯ ಅಂಶವಿದೆ—ದಕ್ಷಿಣ ಭಾರತದ ಭಾಷೆಗಳ ಪುಸ್ತಕಗಳನ್ನು ಒಂದರಿಂದ ಒಂದಕ್ಕೆ ಭಾಷಾಂತರ ಮಾಡಿಸುವ ಏರ್ಪಾಟು. ಈ ಗ್ರಂಥಮಾಲೆ ಪೂರ್ಣವಾದಾಗ ತಮ್ಮ ಜ್ಞಾನವನ್ನು ಬೆಳೆಸಿಕೊಳ್ಳಲು ನೈಜವಾದ ಅಭಿರುಚಿಯುಳ್ಳ ಅಕ್ಷರಸ್ಥರನೇಕರನ್ನು ಪಾಠಕ ಪ್ರಪಂಚಕ್ಕೆ ಇವು ಸೆಳೆಯುತ್ತವೆಂದು ನನಗೆ ನಂಬಿಕೆಯಿದೆ. ಅವರಿಗೆ ಜ್ಞಾನಬಲವನ್ನು ಹೆಚ್ಚಿಸಿಕೊಳ್ಳಲು ಅಮೂಲ್ಯ ಸಾಮಗ್ರಿಯನ್ನು ಒದಗಿಸುವುದೇ ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯ ಕೆಲಸ. ಅದು ಪ್ರಾರಂಭವಾದ ಶ್ರೇಷ್ಠ ಉದ್ದೇಶಗಳನ್ನು ಹೆಚ್ಚು ಹೆಚ್ಚಾಗಿ ನಿರ್ವಹಿಸುತ್ತ ಬರುತ್ತದೆ ಯೆಂದು ಆಶಿಸುತ್ತೇನೆ.

ವೈಸ್ ಛಾನ್ಸಲರ್
ಮದರಾಸ್ ವಿಶ್ವವಿದ್ಯಾನಿಲಯ
ಮದರಾಸು

ಎ. ಲಕ್ಷ್ಮಣಸ್ವಾಮಿ ಮೊದಲಿಯಾರ್

# ವಿವರ

# ಮುನ್ನುಡಿ

ಘನಹೊಂದಿದ

## ಶ್ರೀ ಜಯಚಾಮರಾಜ ಒಡೆಯರ್, ರಾಜ್ಯಪಾಲರು, ಮೈಸೂರು

ಮಾನವನ ಬಾಳಿಗೆ ಆಧ್ಯಾತ್ಮಿಕ ಗುರಿಯೊಂದಿದೆ ಎಂಬ ನಂಬಿಕೆಯ ಅಭಾವವೇ ಆಧುನಿಕ ಕಾಲದ ವ್ಯಾಧಿ. ಇದರಿಂದ ಸಂಭವಿಸಬಹುದಾದ ವಿನಾಶದಿಂದ ಪಾರಾಗಲು ನಿಜವಾದ ಮತಧರ್ಮವನ್ನು ತೀವ್ರವಾಗಿ ಪುನರುತ್ಥಾನಗೊಳಿಸುವುದೊಂದೇ ಮಾನವನಿಗಿರುವ ಮಾರ್ಗ. ಪೂಜ್ಯ ಭಾವನೆ ಎಂಬುದು ಶಿಥಿಲಗೊಳ್ಳುತ್ತಿರುವ ಸೂಚನೆಗಳನ್ನು ನಮ್ಮ ಸುತ್ತಲೂ ಕಾಣುತ್ತಿದ್ದೇವೆ. ನಾವು ಸಾಧಿಸಲೆತ್ನಿಸುತ್ತಿರುವ ಜೀವನವಿಧಾನದಲ್ಲಿ ಯಾವುದಕ್ಕೂ ಪಾವಿತ್ರ್ಯತೆಯೇ ಇಲ್ಲವೋ ಎಂಬಂತೆ ಗೋಚರವಾಗುತ್ತಿದೆ. ಈ ಬಗೆಯ ಭೋಗಪ್ರಧಾನ ಲೌಕಿಕತೆ ನಮ್ಮನ್ನು ಹಾಳು ಮಾಡುತ್ತಿದೆ. ಆಧುನಿಕ ಶಿಕ್ಷಣ ಪಡೆದ ಮಾನವ ತನ್ನ ಸ್ಥಾಯಿ ಆಶ್ರಯವನ್ನೇ ಕಳೆದುಕೊಂಡಿದ್ದಾನೆ; ಚುಕ್ಕಾಣಿ ಮುರಿದ ದೋಣಿಯಲ್ಲಿ ಸಿಕ್ಕಿದ ವ್ಯಕ್ತಿ ಗಾಳಿಯ ಸುಳಿಗೆ ಸಿಕ್ಕಿ ಅತ್ತ-ಇತ್ತ ಹೊಯ್ದಾಡುವ ಸ್ಥಿತಿಯಲ್ಲಿ ಇರುವಂತಿದ್ದಾನೆ. ಈ ಸ್ಥಿತಿಯನ್ನು 'ಗೀತೆ' ಈ ರೀತಿ ವರ್ಣಿಸಿದೆ.

ಇಂದ್ರಿಯಾಣಾಂಹಿ ಚರತಾಂ ಯನ್ಮನೋನುವಿಧೀಯತೇ|
ತದಸ್ಯಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ||

ಮಾನವನ ಮನಸ್ಸು ಚಂಚಲವಾದ ಇಂದ್ರಿಯಗಳ ಬೆನ್ನುಹತ್ತಿದರೆ ಅದು ಅವನ ಪ್ರಜ್ಞೆಯನ್ನು ಹರಣ ಮಾಡಿಬಿಡುತ್ತದೆ, ನೀರ ಮೇಲಿನ ದೋಣಿಗೆ ಬಿರುಗಾಳಿ ಮಾಡುವಂತೆ. ಥಾಮಸ್. ಎ. ಕೆಂಪಿಸ್ ಎಂಬ ಸಂತನೂ ಇದೇ ಬಗೆಯ ಉಪಮೆಯನ್ನು ಕೊಟ್ಟಿದಾನೆ: "ಚುಕ್ಕಾಣಿ ಇಲ್ಲದ ಹಡಗು ಅಲೆಗಳ ಮೇಲೆ ಅಲ್ಲಿಂದಿಲ್ಲಿಗೆ ತೂರಾಡುವಂತೆ ತನ್ನ ಸ್ಥಿರ ಸಂಕಲ್ಪವನ್ನು ನಿರ್ಲಕ್ಷ್ಯ ಭಾವದಿಂದ ಬಿಟ್ಟುಬಿಡುವ ಮನುಷ್ಯನೂ ಅನೇಕ ಬಗೆಯ ಪ್ರಲೋಭನಕ್ಕೆ ಗುರಿಯಾಗುತ್ತಾನೆ." ವಿರೋಧ ಭಾವಗಳ ನಡುವೆ ಸಿಕ್ಕಿಹೋದ ಸಾಮಾನ್ಯ ಪುರುಷ ದಿಗ್ಭ್ರಮೆ ಹಿಡಿದವನಾಗಿದ್ದಾನೆ. ಆದರೂ

ಶಾಂತಿ ಸುಖಗಳ ಅತೀವ ಆಕಾಂಕ್ಷೆ ಅವನ ಹೃದಯದಲ್ಲಿ ತುಮುಲಗೈಯುತ್ತಿದೆ. ಮೋಹಕವೆನಿಸುವ ಮತಧರ್ಮದ ಪ್ರತಿನಿದಾನಗಳು ಪ್ರಯೋಗಿಸಲ್ಪಟ್ಟು ನಿರರ್ಥಕವೆನಿಸಿವೆ. ಬೈಬಲ್ಲಿನ ಒಂದು ದೃಷ್ಟಾಂತ ಕಥೆಯಲ್ಲಿ ಹೇಳಿರುವ ದುಂದು ವ್ಯಯ ಮಾಡಿದ ಮಗ ಶಾಂತಿ ಸುಖಗಳನ್ನರಸಿ ತನ್ನ ತಂದೆಯ ಬಳಿಗೆ ಮರಳಿ ಬಂದಂತೆ ನಾವೂ ಸಹ, ಗಾಂಧೀಜೀ ಹೇಳುವಂತೆ, ಮನಸ್ಸಿಗೆ ನೆಮ್ಮದಿಯ ಆಕರವಾದ ಶಾಂತಿ-ಸುಖ-ಸ್ವರೂಪವೆನಿಸುವ ಚೈತನ್ಯಮಯದೇವನಲ್ಲಿ ಚೈತನ್ಯಯುತ ನಂಬಿಕೆಯನ್ನು ಮರಳಿ ಹೊಂದುತ್ತಿದೇವೆ.

ಈ ಗ್ರಂಥದಲ್ಲಿ ಡಾ॥ ರಾಧಾಕೃಷ್ಣನ್ ಅವರು ಆಧುನಿಕ ಮಾನವನಿಗೆ ಮನ ಮುಟ್ಟುವ ರೀತಿಯಲ್ಲಿ “ ಪವಿತ್ರತೆಯ ಸೌಂದರ್ಯವನ್ನು ” ವರ್ಣಿಸಿದ್ದಾರೆ. ಒಮ್ಮೆ ಅವರ ವಿದ್ಯಾರ್ಥಿಯೇ ಆಗಿದ್ದ ಶ್ರೀವರ್ಮಾ ಎಂ. ಯಾಮುನಾಚಾರ್ಯರು ಮಾಡಿರುವ ಅದರ ಈ ಕನ್ನಡ ಅನುವಾದವನ್ನು ಕನ್ನಡಿಗರು ಸ್ವಾಗತಿಸಿ ಪೂರ್ಣ ಲಾಭ ಪಡೆಯುವರೆಂದು ನಾನು ನಂಬಿದೇನೆ. ಕನ್ನಡದಲ್ಲಿ ಆಧುನಿಕ ವಿಚಾರ ಸಾಹಿತ್ಯಕ್ಕೆ ಇದೊಂದು ಅಮೌಲ್ಯ ಕಾಣಿಕೆ ಎಂದು ನಾನು ಮೆಚ್ಚಿಕೊಂಡಿದೇನೆ.

# ವಿಶ್ವದರ್ಶನ ಗ್ರಂಥಮಾಲೆ

(World Perspectives)

## ಉದ್ದೇಶಗಳು

ಈ ವಿಶ್ವದರ್ಶನ ಗ್ರಂಥಮಾಲೆ ಸತ್ಯಜ್ಞಾನದ ವಿಷಯದಲ್ಲಿ ಒಂದು ನೂತನ ದೃಷ್ಟಿಯನ್ನು ಅಭಿವ್ಯಕ್ತಗೊಳಿಸುತ್ತದೆ. ಮಾನವ ಕುಲದಲ್ಲಿ ಇಂದು ಸಂಭವಿಸುತ್ತಿರುವ ಆಧ್ಯಾತ್ಮಿಕ ಮತ್ತು ಬೌದ್ಧಿಕ ಕ್ರಾಂತಿಯನ್ನು ಸ್ಪಷ್ಟವಾಗಿ ನಿರೂಪಿಸುವ ಯೋಜನೆ ಇದು.

ಸಾಂಸ್ಕೃತಿಕ, ವೈಜ್ಞಾನಿಕ, ಧಾರ್ಮಿಕ, ಸಾಮಾಜಿಕ, ರಾಜಕೀಯ ಮತ್ತು ಕಲಾಕ್ಷೇತ್ರಗಳಲ್ಲಿ ಇಂದು ಆಗುತ್ತಿರುವ ಪರಿವರ್ತನೆಗಳು ಮಾನವನ ಸಮಗ್ರಜೀವನಾನುಭವದ ಮೇಲೆ ಉಂಟುಮಾಡುತ್ತಿರುವ ಪರಿಣಾಮಗಳನ್ನು ಗಣನೆಗೆ ತೆಗೆದುಕೊಂಡು ನಮ್ಮಕಾಲದ ಮೂಲಭೂತ ಪ್ರಶ್ನೆಗಳನ್ನು ಯಾವ ದೃಷ್ಟಿಯಿಂದ ಅವಲೋಕಿಸಬೇಕೆಂಬುದನ್ನು ಪ್ರಮಾಣಬದ್ಧವಾದ ರೀತಿಯಲ್ಲಿ ತೋರಿಸಿಕೊಡುವುದೇ ಇದರ ಗುರಿ. ಈ ಮಾಲೆಯ ಪ್ರತಿಯೊಂದು ಗ್ರಂಥವೂ ಸಮಷ್ಟಿ ಮತ್ತು ವ್ಯಷ್ಟಿ ತತ್ವಗಳನ್ನು ಗಮನದಲ್ಲಿಟ್ಟುಕೊಂಡು, ನಿಸರ್ಗದ ವಿಷಯದಲ್ಲಿ ಮಾನವನ ಭಾವನೆ, ಮತ್ತು ಮಾನವರ ಪರಸ್ಪರ ಸಂಬಂಧಗಳ ಅಭೂತಪೂರ್ವ ಬೆಳವಣಿಗೆ ಇವುಗಳನ್ನೂ, ವಿಶಾಲ ಪ್ರಪಂಚದಲ್ಲಿ ಮಾನವನ ಅಭಿಮುಖ್ಯ ಸ್ಥಾನವೇನೆಂಬುದನ್ನೂ ವಿವರಿಸಲು ಯತ್ನಿಸುತ್ತದೆ.

ಈ ಯುಗದ ಹೊಸ ಜಾಗೃತಿಗೆ ಕಾರಣಕರ್ತರೂ ವಿಶಾಲಭಾವನೆಗಳಿಗೆ ತಾತ್ವಿಕಸ್ವರೂಪ ಕೊಟ್ಟವರೂ ವಿಚಾರ ಕ್ಷೇತ್ರದಲ್ಲಿ ಅತ್ಯಂತ ಹೊಣೆ ಹೊತ್ತವರೂ ಆದ ಜಗದ್ವಿಖ್ಯಾತ ಪ್ರಾಜ್ಞರ ಸೃಜನಾತ್ಮಕ ಪ್ರಯತ್ನದ ಮೂಲಕ, ಭ್ರಾಂತಿಜನಕ ಅಭಿಪ್ರಾಯಗಳನ್ನೂ ಮರುಳುಗೊಳಿಸುವ ಸಂಪ್ರದಾಯಗಳನ್ನೂ ಮೂಲೋತ್ಪಾಟನೆ ಮಾಡಬಲ್ಲ ಸಚೇತಕ ಭಾವನೆಗಳನ್ನು ಮೂಡಿಸಿ. ಮಾನವನಲ್ಲಿ ಆಧ್ಯಾತ್ಮಿಕ ಭಾವನೆಗಳನ್ನೂ ನೈತಿಕ ಮೂಲ್ಯನಿಷ್ಠೆಯನ್ನೂ - ಬೃಹದ್ವಿಶ್ವದಲ್ಲಿ ಅವನ ಸ್ಥಾನವೇನೆಂಬುವನ್ನೂ

ಅರಿವು ಮಾಡಿಕೊಡುವುದೇ ಈ ಗ್ರಂಥಮಾಲೆಯ ಉದ್ದೇಶ: ಕೇವಲ ಸೌಹಾರ್ದ ಭಾವನೆಯನ್ನುಂಟು ಮಾಡುವುದಷ್ಟೇ ಅಲ್ಲ.

ಪ್ರಕೃತಿಯ ಸ್ವರೂಪವನ್ನು ನಮಗೆ ತಿಳಿಸಿಕೊಡಲು ಪ್ರಯತ್ನಿಸುತ್ತಿರುವ ವಿವಿಧಶಾಸ್ತ್ರಗಳು ವಿವಿಧ ವಿಷಯಸಂಗ್ರಹದಲ್ಲಿ ನಮ್ಮನ್ನು ಮುಳುಗಿಸಿವೆ. ಆದರೆ ಅವುಗಳ ಸಾರ್ಥಕ್ಯವೇನು ಎಂಬುದನ್ನು ವಿವರಿಸಲು ಅವಕ್ಕೆ ಸಾಮರ್ಥ್ಯವೂ ಇಲ್ಲ ಸಾಧನವೂ ಇಲ್ಲ. ತನ್ನಿಂದಲೇ ಸೃಷ್ಟಿಯಾದ ಪ್ರಪಂಚದಲ್ಲಿ ತಾನೇ ಆ ಸೃಷ್ಟಿಯ ಜೀವಸತ್ಯವೆಂಬ ಅರಿವನ್ನು ಮಾನವ ಮರೆತಿದ್ದಾನೆ ಎಂಬುದನ್ನು ವಿವರಿಸುತ್ತದೆ ಈ ಗ್ರಂಥಮಾಲೆ. ಅವನ ವ್ಯಕ್ತಿತ್ವ ಖಂಡಖಂಡವಾಗಿ ಛಿದ್ರವಾಗುತ್ತಿದೆ: ಒಂದೊಂದು ಖಂಡ ಒಂದೊಂದು ಶಾಸ್ತ್ರದ ಪ್ರತ್ಯೇಕ ವಿಷಯವಾಗಿರುವುದೇ ಇದಕ್ಕೆ ಕಾರಣ: ತುಂಬು ಜೀವನದ ಸಮಗ್ರತೆ ಸೌಷ್ಠವಗಳನ್ನು ಕಳೆದುಕೊಂಡು ಮಾನವ ಪೃಥಕ್ಕರಣಹೊಂದಿದ ಸತ್ಯದ ಭಿನ್ನಾಂಶಗಳಂತೆ ಆಗುತ್ತಿದ್ದಾನೆ. ಅವನಿಗೆ ಉಳಿದಿರುವ ವ್ಯಕ್ತಿಕತೆ ಅವನ ಜ್ಞಾನಕ್ಕೆ ಅಸಂಗತವಾದ ಭಾವಾಂತರಾಳದ ಒಂದು ಅಭುಕ್ತ ಮೂಲೆಗೆ ಒತ್ತರಿಸಲ್ಪಟ್ಟಿದೆ. ಅಥವಾ ಅವನನ್ನು ವೈಜ್ಞಾನಿಕ ವಿಶ್ಲೇಷಣಕ್ಕೆ ಆಕರವಾದ ಒಂದು ವಿಷಯವನ್ನಾಗಿ ನಿರೂಪಿಸಿದೆ. ಅಂತರಂಗಿಕ ಸಮನ್ವಯವನ್ನಾಗಲೀ, ಜೀವನದ ಸರ್ವಾಂಗೀಣ ಐಕ್ಯತೆಯನ್ನಾಗಲೀ ಅರಿಯುವ ಸಾಮರ್ಥ್ಯವಿಲ್ಲದಷ್ಟು ಅವನನ್ನು ದುರ್ಬಲನನ್ನಾಗಿ ಮಾಡಿದೆ.

ಆದರೂ ತಾನು ಸ್ವತಂತ್ರನೆಂದೂ, ಇಚ್ಛೆ ಶಕ್ತಿ ಸಂಕಲ್ಪಗಳಿಂದ ಕೂಡಿದವನೆಂದೂ, ಅನೇಕ ಕಾರಣಗಳಿಂದ ತನ್ನ ಸ್ವಸ್ವರೂಪಜ್ಞಾನ ತನ್ನನ್ನು ತೊರೆದಿದೆಯೆಂದೂ, ಇದು ಸುಸ್ಥಿತಿಗೆ ಅಪಾಯಕರವೆಂದೂ, ತನಗೂ ಇತರ ವ್ಯಕ್ತಿಗಳಿಗೂ, ತನಗೂ ವಿಶ್ವಕ್ಕೂ ಇರಬೇಕಾದ ಸಂಬಂಧ ಜ್ಞಾನವನು ತಂದುಕೊಡಲು ವಿಜ್ಞಾನಗಳು ಶಕ್ಯವಾಗಿಲ್ಲವೆಂದೂ ಕ್ರಮವಾಗಿ ಮಾನವನಿಗೆ ಅರಿವಾಗುತ್ತಿದೆ. ತಾನು ಜಡವಸ್ತುಗಳ ಮಧ್ಯೆ ಮತ್ತೊಂದು ಜಡವಸ್ತು ಅಲ್ಲವೆಂಬ ಜ್ಞಾನ ಸ್ವಲ್ಪಮಟ್ಟಿಗೆ ತಿಳಿಯಾಗುತ್ತಿದೆ. ಹೀಗೆ ಭಾವಿಸಿಕೊಂಡಿದ್ದರಿಂದ ಇವನ ಪ್ರಪಂಚ ತನ್ನ ವೈಶಿಷ್ಟವಾದ ಐಕ್ಯತೆ, ಸುಸ್ಥಿತಿ, ಸೌಂದರ್ಯಗಳನ್ನು, ಕಳೆದುಕೊಂಡಿತೆಂಬ

ಜ್ಞಾನ ಮೂಡುತ್ತಿದೆ. ಈ ಹೊಸ ಜಾಗ್ರತಿಯ ಸ್ಫುರಣ ಮತ್ತು ಅದರ ಸ್ವರೂಪಗಳನ್ನು ವಿವರಿಸುವುದು ಈ ವಿಶ್ವದೃಷ್ಟಿ ಗ್ರಂಥಮಾಲೆಯ ಪ್ರಯತ್ನ. ವಿಮರ್ಶಾತ್ಮಕವಾಗಿ ಜಗತ್ತಿನಲ್ಲಿ ಮಾನವನ ಸ್ಥಾನ ಮಾನಗಳೇನು ಎಂಬುದನ್ನು ಸ್ಪಷ್ಟಗೊಳಿಸಿ ನಾವು ವಾಸಿಸುತ್ತಿರುವ ಈ ಜಗತ್ತಿನ ಕ್ಲೇಶಗಳಿಗೆ ಪರಿಹಾರವನ್ನು ಸೂಚಿಸುವುದೂ ಇದರ ಪ್ರಯತ್ನ.

ಪೂರ್ವದಲ್ಲಾಗಲೀ ಪಶ್ಚಿಮದಲ್ಲಾಗಲೀ ಪ್ರಚಲಿತ ಮನೋಭಾವ ನಮ್ಮ ವಿಶ್ವದರ್ಶನಕ್ಕೆ ಸಹಾಯ ಮಾಡುವ ಸ್ಥಿತಿಯಲ್ಲಿಲ್ಲ. ಇಷ್ಟು ದಿವಸವೂ ನಾವು ಬಳಸಿಕೊಂಡ ವಿಚಾರ ಮಾರ್ಗ ಇನ್ನು ಮುಂದೆ ಕೆಲಸಕ್ಕೆ ಬಾರದವಾಗುತ್ತದೆ. ಹಳೆಯ ಮಾತುಗಳು ಹೊಸ ಪ್ರಪಂಚಕ್ಕೆ ಹೊಂದಿಕೊಂಡಿಲ್ಲ. ಮಾನವನ ಆಧ್ಯಾತ್ಮಿಕ ಗುರಿಯಲ್ಲಿ ಮತ್ತು ನೈತಿಕ ವಿಕಾಸದಲ್ಲಿ ದೃಢವಾದ ನಿಶ್ಚಯಾತ್ಮಕವಾದ ನಂಬಿಕೆ ಸಡಲಿದೆ. ನೂತನ ಅನುಭವಗಳಿಗೆ ನಾವು ಅಂಜಬೇಕಾಗಿಲ್ಲ. ಆದರೆ ನಾವು ಅಂಜ ಬೇಕಾಗಿರುವುದು ಎಲ್ಲ ಅನುಭವಗಳ ಆಕರವಾದ ಕಾಲ ದೇಶ ಪರಿ ಸ್ಥಿತಿಯಲ್ಲಿ ಆಗಿರುವ ಕೆಲವು ಬದಲಾವಣೆಗಳಿಗೆ. ನಮ್ಮ ಆಚಾರ ವಿಚಾರಗಳು ನಾವು ಊಹಿಸಲಾರದಷ್ಟು ರೀತಿಯ ಪರಿಣಾಮಗಳನ್ನು ಪಡೆದಿವೆ. ನಮ್ಮ ಕಲ್ಪನೆಗಳು ವೈಜ್ಞಾನಿಕ ಭಾವನೆಗಳಿಂದ ಪ್ರಭಾವಿತವಾಗಿವೆ. ಆದರೂ ಈ ಭಾವನೆಗಳ ಅಂತರಾಳವನ್ನು ಭೇದಿಸಲು ನಮ್ಮ ಬುದ್ಧಿ ಅಶಕ್ತವಾಗಿದೆ. ವಿಜ್ಞಾನಕ್ಕೆ ನಮ್ಮ ಕಣ್ಣುಮುಂದೆ ಹರಡಿರುವ ಪ್ರಪಂಚ ವನ್ನು ನಮ್ಮ ಸಾಮಾನ್ಯವಾದ ಮಾತುಗಳಿಂದ ವಿವರಿಸಲು ಅಸಾಧ್ಯ ವಾಗಿದೆ. ಗಣಿತದ ಸಂಕೇತಗಳಿಂದಲೇ ಇದನ್ನು ವರ್ಣಿಸಬೇಕಾಗಿದೆ.

ಕಾಲ ದೇಶ ತತ್ತ್ವಗಳು ಅವುಗಳ ಸ್ಥೂಲ ರೂಪವನ್ನು ಕಳೆದು ಕೊಂಡಿವೆ. ನಾವು ದೃಢವಾಗಿ ನಿಂತಿದ್ದೇವೆಂದು ಭಾವಿಸಿದ್ದ ಭೌತ ಪ್ರಪಂಚ ನಮ್ಮ ಕಾಲಕೆಳಗೇ ಕುಸಿಯುತ್ತಿದೆ. ನಮ್ಮ ಭಾಷೆಯೂ ಪರಿವರ್ತನ ಗೊಳ್ಳುತ್ತಿದೆ. ನಮ್ಮ ಸ್ಥಿತಿ ಅರಾಜಕ ಸ್ಥಿತಿಯಾಗುತ್ತಿದೆ. ಯಾವ ವಿಜ್ಞಾನದಲ್ಲಿ ನಮ್ಮ ಭರವಸೆ ಇಟ್ಟಿದ್ದೆವೋ, ಅದು ತನ್ನ ಉದ್ಧಟತನದಿಂದ ತನ್ನ ನಾಶವನ್ನೇ ತಂದುಕೊಳ್ಳುತ್ತಿದೆ. ಇಂತಹ ಪರಿಸ್ಥಿತಿಯಲ್ಲಿ ವಿಜ್ಞಾನ ಮಾನವನ ವಿಚಾರ ಅನುಭವಗಳ ಪರಿಪಕ್ವ ಸ್ಥಿತಿಗೆ ಹೊಂದಿಕೊಂಡ

ಹೊರತು, ಸರ್ವನಾಶಕ್ಕೆ ನಾವು ಸಿದ್ಧವಾಗಿರಬೇಕಾಗುತ್ತದೆ. ಅಂತರಂಗದ ಆಧ್ಯಾತ್ಮಿಕ ಶಕ್ತಿಗಳ ಪ್ರಾದುರ್ಭಾವ ಉಂಟಾದ ಹೊರತು ಮನುಷ್ಯನಿಗೆ ಉಳಿಗಾಲವಿಲ್ಲ. ಸಹಾಯ ಶೂನ್ಯನಾಗಿ ಬಾಹ್ಯ ಪರಿಸ್ಥಿತಿಗಳಿಗೆ ಆಹುತಿಯಾಗುವ ಅಪಾಯವಿದೆಯೋ ಎನ್ನುವಂತಿದೆ. ಮಾನವನ ಆಧ್ಯಾತ್ಮಿಕರಿಕ್ತತೆ ಮತ್ತು ಭಾವಶೂನ್ಯತೆಗಳಿಂದುಂಟಾದ ಪರಿಸ್ಥಿತಿಯ ಅರಿವಿನಿಂದ ಉದ್ಭವಿಸಿ ಬಂದಿದೆ ಈ ವಿಶ್ವದರ್ಶನ ಮಾಲೆ. ಮಾನವ ಸಂತತವಾಗಿ ಸಂಗ್ರಹಿಸುತ್ತಿರುವ ವಿಷಯ ಜ್ಞಾನವೆಲ್ಲದರ ಪುರುಷಾರ್ಥವೇನೆಂಬ ಪ್ರಶ್ನೆಯನ್ನು ದಮನ ಮಾಡಲು ಇನ್ನು ಸಾಧ್ಯವಿಲ್ಲ. ಪ್ರತಿ ಚೇತನನ ವೈಶಿಷ್ಟವಾದ ಗುಣವಿಕಾಸ ಅದರಲ್ಲಿಯೂ ಮಾನವೀಯ ಗುಣವಿಕಾಸ ಈ ಗ್ರಂಥ ಮಾಲೆಯ ವಿಚಾರಾತ್ಮಕ ವಿಷಯ; ಮಾನವನಲ್ಲಿ ಏಕತೆ ಮತ್ತು ಅನೇಕತೆಗಳು ಒಂದೇ ಸತ್ಯದ ಅಖಂಡವೂ ಆವಶ್ಯಕವೂ ಆದ ಅಂಶಗಳೆಂಬುದನ್ನು ಒಪ್ಪಿಕೊಂಡು ಅದನ್ನು ತರ್ಕಬದ್ಧವಾಗಿ ಪ್ರತಿಪಾದಿಸುತ್ತದೆ. ಯಥಾರ್ಥ ಮಾನವನನ್ನು ನಿರ್ಲಕ್ಷಿಸಿ ಬಾಹ್ಯ ಜಗತ್ತಿನ ರಚನೆಗೆ ಮಾತ್ರ ಗಮನಕೊಡುತ್ತಿರುವ ತತ್ವದರ್ಶನವನ್ನೂ ಇದು ಪ್ರತಿಭಟಿಸುತ್ತದೆ. ಅರ್ಥಪೂರ್ಣವಾದ ಮಾನವತಾ ತತ್ವವನ್ನು ಸೃಷ್ಟಿಮಾಡಲು, ಕೇವಲ ಕಾರ್ಯಕಾರಣ ಸಂಬಂಧವೊಂದೇ ಅಲ್ಲದೆ ಪಾರಸ್ಪರ್ಯ ಸಂಬಂಧವೂ ಪ್ರಧಾನಾಂಗವಾಗುಳ್ಳ ಜೀವಸತ್ಯಕ್ಕೆ ಮಾತ್ರ ಸಾಧ್ಯವೆಂಬುದನ್ನು ಪ್ರತಿಪಾದಿಸುತ್ತದೆ. ಮಾನವ ಜೀವನದ ಸಾರ್ಥಕತೆ ಯಾವುದರಲ್ಲಿದೆ ಎಂಬುದನ್ನು ಸ್ಪಷ್ಟಗೊಳಿಸುತ್ತದೆ. ಪ್ರಕೃತಿ ಪುರುಷ ತತ್ವಗಳ ಪೃಥಕ್-ಕೃತ ಜ್ಞಾನ ಸ್ವಲ್ಪಮಟ್ಟಿಗೆ ಆವಶ್ಯಕವೆನಿಸಿದರೂ ಅದು ಆ ತತ್ತ್ವಸ್ವರೂಪವನ್ನು ವಿಕೃತಗೊಳಿಸಲು ಕಾರಣವಾಗುವಂತಹ ವಿಷಾದಕರ ಪರಿಣಾಮದ ಬಗೆಗೆ ಎಚ್ಚರವೀಯುತ್ತದೆ. ಅತಿ ಪ್ರಾಚೀನವೂ ಅತಿನವೀನವೂ ಆದ ಸಮಗ್ರ ನೀತಿದರ್ಶನದ ಆಧಾರದ ಮೇಲೆ ಹೊಸ ಜಗತ್ತನ್ನೂ ಹೊಸ ಜಾಗತಿಕ ಸಮಾಜವನ್ನೂ ಸೃಷ್ಟಿಸಲು ಪ್ರಯತ್ನಿಸುತ್ತದೆ. ಜೀವನದ ಸಂಪ್ರದಾಯಬದ್ಧ ನೈತಿಕ ವಿಧಾನಗಳನ್ನಲ್ಲದೆ ಬಾಳಿನ ಸ್ವಭಾವವನ್ನೂ, ವಿಶ್ವದೊಡನೆ ಮಾನವನ ಸಂಬಂಧದ ಸ್ವರೂಪವನ್ನೂ, ಸಮಗ್ರ ಮಾನವಕುಲದೊಡನೆ ಅವನ ಸಂಬಂಧವನ್ನೂ ವಿಶ್ಲೇಷಣ ಮಾಡಿ ಪುನರ್ವಿವರಣೆ ಕೊಡಲು ಯತ್ನಿಸು

ವುದೇ ಇದರ ಅಂತಿಮ ಉದ್ದೇಶ. ಇಂಥ ವಿಚಾರ ಧಾರೆಯಿಂದಲೇ ಮಾನವನ ಸ್ವಾತಂತ್ರ್ಯ, ಅವನ ವ್ಯಕ್ತಿತ್ವದ ಸತ್ವಗಳನ್ನು ಪುನಹ ಪ್ರತಿಷ್ಠಾಪನೆ ಮಾಡಿ ವಿಜಯದೆಡೆಗೊಯ್ಯಬಲ್ಲ ಮೂಲಭೂತ ತತ್ವಗಳು ಮೂಡಿಬಂದಾವು. ಏಕೆಂದರೆ ಅಂತ್ಯದಲ್ಲಿ ವೀರ್ಯವತ್ತಾದ ಸಿದ್ಧಾಂತಗಳಿಂದಲೇ ಅತಿಯಾಗಿ ಹಬ್ಬಿರುವ ಅಪಸಿದ್ಧಾಂತಗಳ ಮೂಲೋತ್ಪಾಟನ ಸಾಧ್ಯ. ಸಂಯಮ ಪೂರ್ಣ ಸತ್ಯದರ್ಶನದಿಂದ ಜನಿಸಬಹುದಾದ ಸಾರ್ವತ್ರಿಕವೂ ಸಮರಸವೂ ಆದ ಜೀವನ ತತ್ವಸಾಧನೆಗೆ ಉಗ್ರತಪಶ್ಚರ್ಯದಿಂದ ಸಂತತವಾಗಿ ತಮ್ಮನ್ನೇ ಸಮರ್ಪಣೆ ಮಾಡಿಕೊಂಡವರೂ, ನಿರ್ಭೀತರೂ, ದಾಕ್ಷಿಣ್ಯರಹಿತರೂ ಆದ ತೇಜೋವಂತ ಜ್ಞಾನಿಗಳ ವಿಚಾರಧಾರೆಯನ್ನು ಪರಿಚಯ ಮಾಡಿಕೊಡುವುದೇ ಈ ದರ್ಶನಮಾಲೆಯ ಗುರಿ. ಮಾನವ ಚೇತನದ ಆಕಾಂಕ್ಷೆಗಳನ್ನೂ, ಮಾನವ ಸ್ಪರ್ಶಕ್ಕೊಳಗಾದುದೆಲ್ಲವನ್ನೂ ಆವರಿಸಿ, ನಿಯಂತ್ರಣಗೊಳಿಸುವ ಪ್ರಭಾವವನ್ನು ಮನುಷ್ಯನ ಪ್ರಜ್ಞಾಸಾಮರ್ಥ್ಯ ಪಡೆಯಬೇಕಾಗಿದೆ. ಮೂಲಭೂತವಾದ, ಉಜ್ವಲವಾದ, ನವೀನವಾದ ಹೃದಯ ಸ್ಪರ್ಶಿತತ್ವಗಳ ಮೂಲಕ ನವೋನ್ಮೇಷ ಸತ್ಯದರ್ಶನದಿಂದ ಇದನ್ನು ಸಾಧಿಸಬಲ್ಲ ಮಹಾ ಸೌಧದ ಶಿಲ್ಪಿಗಳಾಗಲು ಈ ಗ್ರಂಥ ಕರ್ತರು ಶ್ರಮಿಸುತ್ತಾರೆ. ರಾಗದ್ವೇಷಗಳನ್ನು ನಿವಾರಿಸಿ, ಕಾಂತಾಸಮ್ಮಿತ ರೀತಿಯ ಉಪದೇಶಗಳಿಂದ ಮನಸ್ಸನ್ನು ಒಲಿಸಿಕೊಂಡು, ನೂತನ ಜೀವನ ಮಾರ್ಗದ ಶುಭೋದಯವನ್ನು ಗಳಿಸಿಕೊಡುವ ಸೌಜನ್ಯದ ಮಾರ್ಗವನ್ನೇ ಇವರು ಅವಲಂಬಿಸಿದ್ದಾರೆ.

ಎಲ್ಲ ಕ್ಷೋಭೆಯ ಮಧ್ಯೆ ಅಕ್ಷಯವಾಗಿ, ಅತಿಸೂಕ್ಷ್ಮವೂ ಅಮಾಂಗ್ಮಾನಸ ಗೋಚರವೂ ಆದ ಸೃಜನಾತ್ಮಕ ಶಕ್ತಿಯೊಂದು ಜಗತ್ತಿನಲ್ಲಿ ಕೆಲಸ ಮಾಡುತ್ತಿದೆ; ಮಾನವ ಸಂಕಲ್ಪಿತ ಕಾರ್ಯಗಳಿಗಿಂತ ಅತೀತವಾಗಿ, ಪ್ರಜ್ಞೆಗೂ ನಿಲುಕದಿರುವ ಅಸಾಧಾರಣ ಸಾಧನೆಗಳಲ್ಲಿ ಅವನನ್ನು ತೊಡಗಿಸುವ ನಿಗೂಢರಹಸ್ಯವೊಂದು ಮಾನವ ಚೇತನದಲ್ಲಿ ಹಾಸುಹೊಕ್ಕಾಗಿ ಹೆಣೆದುಕೊಂಡಿದೆ. ಈ ಕಾರಣದಿಂದ ತರ್ಕಕ್ಕೆ ನಿಲುಕದ ಅತ್ಯಂತ ಗಾಢವಾದ ಮಾನಸಿಕ ಪರಿವರ್ತನೆಗಳನ್ನು ಈ ಲೇಖಕರು ಸ್ಫುಟೋಚ್ಚರಿತ ಭಾಷೆಯಲ್ಲಿ ವರ್ಣಿಸುತ್ತಾರೆ.

ಈ ಚಿದಚಿದಾತ್ಮಕ ಜಗತ್ತಿನಲ್ಲಿ ಕಾಲದೇಶ ಪರಿಚ್ಛಿನ್ನವಾದ ಈ ಪ್ರಪಂಚದಲ್ಲಿ ತನ್ನ ಜ್ಞಾನ ಪಾರಮ್ಯದ ಕಾರಣದಿಂದ ಮಾನವ ಒಂದು ವಿಶಿಷ್ಟ ತತ್ವವಾಗಿ ಉಳಿದಿದ್ದಾನೆಂದು ವಿಶ್ವದರ್ಶನ ಗ್ರಂಥಮಾಲೆ ಪ್ರತಿಪಾದಿಸುತ್ತದೆ. ಈ ಮಾರ್ಗದಿಂದಲೇ ಸಂಕುಚಿತ ಸಂಪ್ರದಾಯಬದ್ಧ ಪ್ರಾಚೀನ ಸಮಾಜ ಕೊನೆಯಲ್ಲಿ ಭವಿಷ್ಯದ ವಿಶ್ವ-ಮಾನವ ಸಮಾಜವಾಗಿ ಪರಿವರ್ತನೆಗೊಂಡೀತು. ಬಂಧನಕಾರಿಯೂ,ವಿನಾಶಕರವೂ ಆದ ಅಪಸಿದ್ಧಾಂತಗಳಿಂದ ಮಾನವ ಮುಕ್ತನಾದಾನು. ಬುದ್ಧಿಶಕ್ತಿಯ ಅತ್ಯಧಿಕ ಸ್ವಾತಂತ್ರ್ಯವನ್ನಳವಡಿಸಿಕೊಂಡು ಸುಸ್ಥಿರ ಶಿಲಾಧಾರದಂತಿರುವ ಒಂದು ಮಹಾನಿಯಮ, ಒಂದು ಚಿರಜಾಗೃತ ಶಕ್ತಿ, ಒಂದು ಜೀವತತ್ವ ಇದೆ ಎಂಬುದನ್ನು ಮನಸ್ಸೂ ಹೃದಯವೂ ಮರೆಯದಿದ್ದರೆ ಮಾತ್ರ ಇದು ಸಾಧ್ಯ. ಈ ತತ್ವ, ಈ ಧರ್ಮ ಚಿರಂತನವಾದುದು. ಸತ್ಯನಿಷ್ಠೆ, ಮಾನವ ಬಂಧುತ್ವ, ಜ್ಞಾನದ ಐಕ್ಯತೆ, ಕಶ್ಮಲರಹಿತ ಭಾವಭಾವನೆಗಳ ಸಾಮರಸ್ಯ, ಜ್ಞಾತೃಜ್ಞೇಯಗಳ ಐಕ್ಯಭಾವ, ಬಾಹ್ಯಾಂತರ್ಯಗಳ ದೃಶ್ಯಾದೃಶ್ಯಗಳ ಒಮ್ಮತ, ಅಣು-ತರಂಗ ಆಕಾರ-ವಸ್ತು ಆತ್ಮ-ಅನಾತ್ಮ ಇವೆಲ್ಲದರ ಅಖಂಡತೆ, ಸಮಗ್ರತೆ, ಪೂರ್ಣತೆ ಇವೇ ನಿತ್ಯಸತ್ಯಗಳು. ನಾವೆಲ್ಲರೂ ಪರತತ್ವದ ಕಿಡಿಗಳೆಂಬುದನ್ನು ಮರೆಯದಿರೋಣ. ಜೀವಸತ್ವದ ನೂತನ ಆವಿಷ್ಕಾರಗಳು ಅಪ್ರತಿಹತವಾಗಿ ಧಾವಿಸುತ್ತಿರುವುದನ್ನರಿತು, ಈ ವಿಕಾಸಶೀಲ ಜೀವನ-ಪ್ರವಾಹಕ್ಕೆ ತಡೆಯಾಗಿ ನಿಲ್ಲದೆ ಮುಕ್ತ ಚೇತನರಾಗಿ ಬಾಳೋಣ.

ನ್ಯೂಯಾರ್ಕ್,
೧೯೫೮

**ರುತ್ ನಂದಾ ಅನ್‌ಷೆನ್**

೧

# ಪ್ರವೇಶ

ಇಂದಿನ ಜಗತ್ತಿಗೆ ಅತ್ಯಗತ್ಯವಾಗಿ ಬೇಕಾಗಿರುವುದು ಆಧ್ಯಾತ್ಮಿಕ ಜಾಗ್ರತಿ, ಮತಧರ್ಮದ ಪುನರುಜ್ಜೀವನ. ಇದು ಸಾಮಾಜಿಕ, ರಾಜಕೀಯ ಅಥವಾ ಆರ್ಥಿಕ ಪುನರ್ವ್ಯವಸ್ಥೆಗಿಂತಲೂ ಆಳವಾದ ಅಗತ್ಯ ಎಂದು ಸೂಕ್ಷ್ಮ-ಮತಿಗಳೂ ಪ್ರಾಜ್ಞರೂ ನಂಬುತ್ತಾರೆ.

ನಾಗರಿಕತೆ ಕುಸಿದು ಬಿದ್ದಾಗ, ನಿರಾಶೆ ಮನಸ್ಸಿನಮೇಲೆ ಕವಿದಾಗ ಮನುಷ್ಯನ ಮನಸ್ಸು ಅಸಂತುಷ್ಟಿಯಿಂದ ಕ್ಷೋಭೆಗೊಳ್ಳುತ್ತದೆ. ತನ್ನ ನಿಜ ವಾದ ಆಧಾರವೇನೆಂದು ಮತ್ತೊಮ್ಮೆ ವಿಚಾರಮಾಡಲು ತೊಡಗುತ್ತದೆ. ಮನುಷ್ಯ ತನಗೆ ತಾನೇ ಅಡ್ಡವಾಗಿನಿಂತು ತನ್ನ ವಿಜ್ಞಾನದ ಸಹಾಯದಿಂದ ಜಗತ್ತನ್ನೇ ಪ್ರಳಯಕ್ಕೆ ಗುರಿಮಾಡುತ್ತಿದ್ದಾನೆ. ಪಾಪದಫಲ ಸರ್ವನಾಶ ಎನ್ನುವ ಎಚ್ಚರಿಕೆಯನ್ನು ನಮ್ಮ ನೆನಪಿಗೆ ತಂದುಕೊಡುತ್ತಿದ್ದಾನೆ.

ಶಸ್ತ್ರ ಸಜ್ಜಿತವಾದ ಜಗತ್ತು ಎರಡು ಪರಸ್ಪರ ವಿರೋಧ ಶಿಬಿರಗಳಾಗಿ ಒಡೆದು ನಿಂತಿದೆ. ಒಂದರಮೇಲೊಂದು ಧಾಳಿನಡೆಸಲು ಸಿದ್ಧವಾಗುತ್ತಿವೆ. ಈ ಭೀತಿ ನಮ್ಮ ಆಲೋಚನೆಗಳನ್ನು, ಅಂತರ್ಭಾವಗಳನ್ನು ಆವರಿಸಿ ನಿಂತಿದೆ. ಮುಂದೆ ಹೇಗೋ ಅನ್ನುವ ಚಿಂತೆ ನಮ್ಮನ್ನು ಕಾಡುತ್ತಿದೆ. ನಮ್ಮ ಸಂಪತ್ತು ಹೇರಳವಾಗಿದೆ, ನಮ್ಮ ಸಾಮರ್ಥ್ಯ ವಿಪುಲವಾಗಿದೆ. ಅನೇಕ ರೀತಿಯ ಶಕ್ತಿಗಳನ್ನು ಬೆಳಸಿಕೊಂಡಿದ್ದೇವೆ, ಆದರೂ ಶಾಂತಿಯಿಲ್ಲ, ಭರವಸೆ ಇಲ್ಲ. ಅರಿವು ಹೆಚ್ಚಿದೆ, ಬುದ್ಧಿ ಅರಳಿದೆ, ಆದರೆ ವಿವೇಕದ ವಿಕಾಸವಾಗಲಿ ಶೀಲದ ವೃದ್ಧಿಯಾಗಲಿ ಸಂಭವಿಸಿಲ್ಲ. ಶೀಲವಿಲ್ಲದೆ ಪರಸ್ಪರ ವೈಷಮ್ಯದಲ್ಲಿ ಸಿಕ್ಕಿಬಿದ್ದಿದ್ದೇವೆ. ಜಗತ್ತನ್ನು ಧಾರಣೆ ಮಾಡುವ ಒಂದು ಧರ್ಮ ಇಲ್ಲ ದಾಗಿದೆ. ಇಲ್ಲಿನವರೆಗೂ ವಿವೇಕ ಸದ್ಗುಣಗಳನ್ನು ಧಾರ್ಮಿಕ ಜೀವನ ಪೋಷಿಸುತ್ತಿತ್ತು. ಆದರೆ ಧರ್ಮದಿಂದ ಬಹುದೂರ ಸರಿದಿದ್ದೇವೆ. ಪ್ರಪಾತಕ್ಕೂ ನಮಗೂ ಇರುವ ಅಂತರ ಅಪಾಯಕಾರಿಯಾಗುವಷ್ಟು ಸ್ವಲ್ಪ ಉಳಿದಿದೆ. ಈ ಯುಗದ ಸಾಮಾಜಿಕ ರೋಗವನ್ನು ಸ್ವಾರ್ಥಕ್ಕಾಗಿ ಉಪ

ಯೋಗಿಸಿಕೊಳ್ಳುವ ಜನ ಬಹುಮಂದಿಯಾಗುತ್ತಿದ್ದಾರೆ. ಇವರು ಮುಖಂಡರಂತೆ ನಟಿಸುತ್ತಾ ತಮ್ಮ ಮೌಢ್ಯವನ್ನೇ ವಿವೇಕವೆಂದು ಸಾರುತ್ತಿದ್ದಾರೆ. ಸಿಕ್ಕಿದ ಹಾಗೆ ಕಾಳುಕಳೆಗಳನ್ನು ಒಟ್ಟಿಗೆ ಬಿತ್ತುತ್ತಿದ್ದೇವೆ.

ಇತಿಹಾಸ ಸಂಬಂಧವಾಗಿ ನಿಯತಿವಾದವನ್ನು (Determinst view) ಪ್ರತಿಪಾದಿಸುವವರಿಗೆ ಇಚ್ಛಾಸ್ವಾತಂತ್ರ್ಯದ ಸಮರ್ಪಕವಾದ ಕಲ್ಪನೆಯೇ ಇರುವಂತಿಲ್ಲ. ಅವರದು ಕುದೃಷ್ಟಿ. ಅದರಲ್ಲಿ ಆಳವಿಲ್ಲ, ಗಾಂಭೀರ್ಯವಿಲ್ಲ. ವಿಧಿಯ ನೆರಳಿನಲ್ಲಿ ಮಾನವನ ಹೋರಾಟವೆಂತಹುದೆಂಬ ಅರಿವೇ ಅವರಿಗಿಲ್ಲ. ಮಾನವನ ಆತ್ಮ ಸ್ವಾತಂತ್ರ್ಯದಲ್ಲಿ ನೆಚ್ಚಿಕೆ ಇಲ್ಲದಿದ್ದರೆ, ನಿಸರ್ಗ ಮತ್ತು ಇತಿಹಾಸ ನಮಗೆ ಆಗಿರುವಂತೆ ನಮ್ಮ ಜೀವನವೂ ಉದ್ದೇಶ ಶೂನ್ಯವಾಗುತ್ತದೆ. ಕರ್ಮವನ್ನು ಸ್ವಾತಂತ್ರ್ಯದಿಂದಲೇ ಜಯಿಸಲು ಸಾಧ್ಯ. ಐತಿಹಾಸಿಕ ವಿಧಿ ಶೃಂಖಲೆಯನ್ನು ಆತ್ಮನ ಸ್ವಾತಂತ್ರ್ಯ ಪ್ರವೃತ್ತಿಯಿಂದಲೇ ಜಯಿಸಬೇಕು. "ದೇವನು ತನ್ನ ದೇಗುಲವನ್ನು ನೆಲಸಮ ಮಾಡುತ್ತಿದ್ದಾನೆ. ದೇವನ ಹೆಸರಿನಲ್ಲೆ ಅವನ ರುದ್ರ ಲೀಲೆಯಿಂದ ದೇಗುಲವನ್ನು ರಕ್ಷಿಸು." ಮಾನವನ ಮಾರ್ಗ ಅಧಮತೆಯಿಂದ ಉತ್ತಮತೆಯ ಕಡೆಗೆ ಸಾಗುವುದು; ಪಶುತ್ವದಿಂದ ಮೇಲೇರುವುದು. ಮಾನವ ವ್ಯಕ್ತಿ ನಿರ್ಜೀವವಾದ ವಸ್ತುವಲ್ಲ. ವಸ್ತುಗಳ ಮಧ್ಯೆ ನಿರರ್ಥಕವಾದ ಮತ್ತೊಂದು ವಸ್ತುವಲ್ಲ. ಪೂರ್ಣವಾಗಿ ನಿಯಮಿತಗೊಳಿಸಲ್ಪಟ್ಟ ಚಿತ್ತವೃತ್ತಿಯಲ್ಲ. ಅವನ ಆಂತರಿಕ ಸತ್ವವನ್ನು ಬದಿಗಿಟ್ಟರೆ ಅವನೊಂದು ಬಾಹ್ಯ ವಸ್ತುವಾಗುತ್ತಾನೆ. ಕರ್ಮಬಂಧನಕ್ಕೆ ತುತ್ತಾಗುತ್ತಾನೆ. ಬಾಹ್ಯ ಪ್ರಪಂಚದ ಘಟನೆಗಳಿಂದ ಬಿಡುಗಡೆ ಹೊಂದಲು ಅವನು ಶಕ್ತ. ಅವನು ಸ್ವಸ್ವರೂಪವನ್ನೂ ತಾಳಬಲ್ಲ. ಇಡೀ ಮಾನವ ಇತಿಹಾಸದ ಉದ್ಯಮ ಸ್ವಾತಂತ್ರ್ಯ ಸಾಧನೆಯ ಸಂತತ ಪ್ರಯತ್ನ. ಜಗತ್ತಿನ ಜೀವ ಜ್ಯೋತಿಗಳಾದ ಬುದ್ಧ, ಸಾಕ್ರೆಟಿಸ್, ಸರತುಷ್ಟ್ರ, ಏಸು, ಇವರು ಮಾನವ ಸ್ವಭಾವದಲ್ಲಿ ಹುದುಗಿರುವ ದೇವಾಂಶದ ಆವಿರ್ಭಾವದ ಸಾಕ್ಷಿಗಳು. ನಾವು ಆತ್ಮಸಾಕ್ಷಿಗನುಸಾರವಾಗಿ ಬಾಳಲು ಇವರೇ ನಮಗೆ ಧೈರ್ಯನೀಡುತ್ತಾರೆ.

ಪ್ರಗತಿ ಹಿಂದೆಂದೂ ಸಂತತ ಧಾರೆಯಾಗಿ ಮುಂದುವರಿಯುವುದೇ ಆಗಿರಲಿಲ್ಲ. ಒಂದು ದಿಸೆಯಲ್ಲಿ ಮುಂದುವರಿದಿವೆ ಮತ್ತೊಂದು ದಿಸೆಯಲ್ಲಿ

ಹಿಂದೆಬೀಳುವಂತಾಗಿದೆ. ನಮ್ಮ ಭೌತಿಕ ಸನ್ನಿವೇಶವನ್ನು ರೂಪಿಸಿಕೊಳ್ಳು ವುದರಲ್ಲಿ, ಹೆಚ್ಚು ಪ್ರಗತಿಯನ್ನು ಸಾಧಿಸಿದ್ದೇವೆ. ಆದರೆ ಮಾನವ ಸಂಬಂಧ ಗಳನ್ನು ಉತ್ತಮಪಡಿಸುವುದರಲ್ಲಿ ಇಷ್ಟು ಮುಂದುವರಿದಿಲ್ಲ. ಇತಿಹಾಸದ ಗತಿಯಲ್ಲಿ ಒಂದು ನಿಯತಿ, ಯೋಜನೆ, ಮಾದರಿ ಇರುವಂತಿಲ್ಲ. ಮಾನವನ ಇಚ್ಛಾಸ್ವಾತಂತ್ರ್ಯದ ಫಲವಾಗಿ ಮಾನವಲೋಕ ಒಂದು ಘಟ್ಟದಿಂದ ಮತ್ತೊಂದು ಘಟ್ಟಕ್ಕೆ ನೆಗೆದಿದೆ. ಇಂದಿನ ಸನ್ನಿವೇಶದ ಅರಿವು ನಮಗಾದಾಗ ಉದ್ದೇಶಪೂರ್ವಕವಾಗಿ ನಾವು ಪರಿಣಾಮ ರೂಪವಾದ ಕ್ರಿಯೆಯನ್ನೂ ಮಾಡಬಲ್ಲವರೆಂದು ತಿಳಿಯುತ್ತೇವೆ. ಈ ಸನ್ನಿವೇಶ ವಿಧಿವಶವಾದುದಲ್ಲ, ಅನಿವಾರ್ಯವಾದುದಲ್ಲ. ವಿನಾಶವೇ ನಮ್ಮ ವಿಧಿಯಾಗಬೇಕಾಗಿಲ್ಲ. ನಮ್ಮ ಭವಿಷ್ಯ ನಮ್ಮ ಆಲೋಚನೆ ಸಂಕಲ್ಪಗಳ ಮೇಲೆ ಆಧಾರ ಹೊಂದಿದೆ. ಸನ್ನಿವೇಶದ ಸ್ವರೂಪವನ್ನು ಅರಿಯವುದು ಅದನ್ನು ನಮ್ಮ ಹತೋಟಿಗೆ ತಂದುಕೊಳ್ಳುವುದರ ಮೊದಲ ಹೆಜ್ಜೆ. ಅದನ್ನು ಅರಿತಾಗ ಅದನ್ನು ಪರಿವರ್ತನಗೊಳಿಸಬೇಕೆಂಬ ಇಚ್ಛೆ ಹುಟ್ಟುತ್ತದೆ. ನಮಗೆ ಇಷ್ಟ ಬಂದಂತೆ ಈ ಪರಿಣಾಮವನ್ನು ನಿಧಾನಮಾಡಬಹುದು ಅಥವಾ ತೀವ್ರಗೊಳಿಸಬಹುದು. ನಮ್ಮ ಜೀವನದಲ್ಲಿ ಇರುವ ತೊಡಕಿನ ಸಲುವಾಗಿ ನಮ್ಮ ಭವಿಷ್ಯವನ್ನೂ ಕುರಿತು ನಿಶ್ಚಿತವಾಗಿ ಹೇಳುವುದು ಕಷ್ಟ.

ಪರಿವರ್ತನೆ ಜೀವನದ ನಿಯಮ. ಮಾನವ ತನ್ನ ಸುತ್ತಲಿನ ಸನ್ನಿ ವೇಶಕ್ಕೆ ಹೊಂದಿಕೊಳ್ಳುತ್ತಾನೆ. ನೀರಿನ ಮಧ್ಯೆ ಜೀವಿಸಬೇಕಾದಾಗ ಅದು ನೀಡುವ ಆಹಾರಕ್ಕಾಗಿ ಬೆಸ್ತನಾಗುತ್ತಾನೆ. ಸಸ್ಯ ಸಮೃದ್ಧಿಯುಳ್ಳ ಉಷ್ಣ ವಲಯದಲ್ಲಿ ವಾಸಿಸಬೇಕಾದಾಗ ಹಣ್ಣು ಹಂಪಲು ಬೆಳೆಯುವ ತೋಟಗಾರ ನಾಗುತ್ತಾನೆ. ಬಾಹ್ಯ ಪ್ರಕೃತಿಯೊಡನೆ ಮತ್ತು ತನ್ನ ಆಂತರ್ಯದೊಡನೆ ಮಾನವ ಸಮರಸದಿಂದ ಬಾಳುವುದು ಅಗತ್ಯ. ಇದೊಂದೇ ಇವನ ಉಳಿವಿನ ಸಾಧನ. ಎಲ್ಲ ಧರ್ಮಗಳೂ ತಮ್ಮಗುರಿ ಮಾನವಕುಲದ ಒಕ್ಕೂಟವೆಂದು ಸಾರುತ್ತವೆ. ಇದು ಭೌತಿಕವಾಗಿ, ಭೌಗೋಳಿಕವಾಗಿ ಸಂಭವಿಸಿದೆ. ಆದರೆ ನಮ್ಮ ಮನಸ್ಸು ಹೃದಯಗಳು ಈ ಒಕ್ಕೂಟವನ್ನು ಅಂಗೀಕರಿಸಲು ಸಿದ್ಧ ವಾಗಬೇಕಾಗಿದೆ. ಜನರ ಬಣಗಳ ರಾಷ್ಟ್ರಗಳ ಧರ್ಮಗಳ ವಿಭಿನ್ನತೆ ವೈಷಮ್ಯ ಗಳೊಳಗಿನಿಂದ ಈ ಐಕಮತ್ಯದ ಸಿದ್ಧಿ ಆಗಬೇಕಾಗಿದೆ. ಇದಕ್ಕೆ ಒಂದು

ಹೊಸಭಾವನೆಯೇ ಅಗತ್ಯ. ನಮ್ಮ ದೃಷ್ಟಿಯಲ್ಲಿ ಮೂಲಭೂತವಾದ ಪರಿವರ್ತನೆ, ಸಾಹಸಮಯ ಉದ್ಯಮ ಅಗತ್ಯ.

ಮಾನವ ಕುಲ ನಿಜವಾಗಿಯೂ ಇಂದಿನದಕ್ಕಿಂತಲೂ ಮಿಗಿಲಾದ ಮತ್ತು ಉತ್ಕೃಷ್ಟವಾದ ನೀತಿಯ ಅಂತಸ್ತನ್ನು ಮುಟ್ಟಬಲ್ಲದು ಎನ್ನುವ ನಂಬಿಕೆ ಇಲ್ಲದಿದ್ದರೆ ಮಾನವ ಉಳಿಯಲಾರ, ಉದ್ಯಮಶೀಲನಾಗಲಾರ. ಕಟ್ಟಕಡೆಗೆ ಮಾನವ ತನ್ನ ಜೊತೆಯ ಮಾನವರೊಡನೆ ಸಮರಸದಿಂದ ಬಾಳಬಹುದು, ಒಬ್ಬರನ್ನೊಬ್ಬರು ಅರಿಯಬಹುದು ಎನ್ನುವ ಕನಸು ಕಾಣದೆ ಬಾಳುವುದು ಅಶಕ್ಯ. ವ್ಯಕ್ತಿಗಳಲ್ಲಿ ರಾಷ್ಟ್ರಗಳಲ್ಲಿ ಪರಸ್ಪರ ಋಣಾನುಬಂಧಕಗಳೂ ಇವೆ, ಬಾಧಕಗಳೂ ಇವೆ. ಮಾನವ ಕುಲದ ಕಟ್ಟಕಡೆಯ ಗುರಿ ಹೆಚ್ಚು ಹೆಚ್ಚಿನ ಮಾನವತ್ವ, ಹೆಚ್ಚು ಆಧ್ಯಾತ್ಮಿಕತೆ, ಪರಸ್ಪರ ಬುದ್ಧಿಪೂರ್ವಕ ಅನುಕಂಪ. ಭ್ರಮೆ ಭಯಗಳು ಎಲ್ಲೆಲ್ಲೂ ಹರಡುತ್ತಿರುವ ಈ ಕಾಲದಂತಹ ಸಮಯಗಳಲ್ಲಿ ಇಂತಹ ಆಕಾಂಕ್ಷೆ ಮಾನವ ಹೃದಯದಲ್ಲಿ ಪ್ರಭಾವಿತವಾದ ರೀತಿಯಲ್ಲಿ ಏಳುತ್ತದೆ.

ಜಗತ್ತಿನ ಮಹಾಧರ್ಮನಿಷ್ಠ ಆಚಾರ್ಯರು ತಮ್ಮ ಕಾಲಕ್ಕೆ ಪರಂಪರಾನುಗತವಾಗಿ ಪ್ರಾಪ್ತವಾದ ಪೂರ್ವಾಚಾರಕ್ಕೆ ಪ್ರತಿಯಾದದ್ದನ್ನೆ ಉಪದೇಶಿಸುತ್ತಾರೆ. ಉಪನಿಷತ್ತಿನ ಋಷಿಗಳು, ಗೌತಮಬುದ್ಧ, ಜರತುಷ್ಟ್ರ, ಸಾಕ್ರೆಟಿಸ್, ಏಸು, ಮೊಹಮ್ಮದ್, ನಾನಕ್, ಮತ್ತು ಕಬೀರ್ ಕಂಡಾಚಾರಗಳ ತೊಡಕಿನಿಂದ ಬಿಡಿಸಿಕೊಂಡು ಬಾಳುವುದು ಅನಿವಾರ್ಯವಾಯಿತು. ಉಪನಿಷತ್ತಿನ ಋಷಿಗಳು ಮತ್ತು ಬುದ್ಧ ವೈದಿಕಯಾಗವಿಧಿಗಳನ್ನು ಎದುರಿಸಿದರೆ, ಏಸು ಯಹೊದ್ಯರ ಮಡಿವಂತಿಕೆಯನ್ನು ಪ್ರತಿಭಟಿಸಿದ. ನಾವೂ ಸಹ ಮತಧರ್ಮದ ತಿರುಳನ್ನು ಬಾಹ್ಯಾಚಾರ ಸಂಸ್ಥೆಗಳ ಶೈಥಿಲ್ಯದಿಂದ, ಕಾಲದ ವೈಪರೀತ್ಯಗಳಿಂದ ರಕ್ಷಿಸಬೇಕಾಗಿದೆ. ಇಂದಿನ ಕಾಲದ ಅಗತ್ಯಗಳಿಗೆ ಅವಶ್ಯಕತೆಗಳಿಗೆ ತಕ್ಕಂತೆ, ಜೀವಕಳೆಯನ್ನು ಕಳೆದುಕೊಂಡಿರುವ ಮಡಿವಂತಿಕೆಯ ಮತವನ್ನು ದೂರಮಾಡಬೇಕು. ಮಾಳವಿಕಾಗ್ನಿಮಿತ್ರ ನಾಟಕದಲ್ಲಿ ಕಾಳಿದಾಸ ಹೇಳುತ್ತಾನೆ : " ಹಳೆಯದು ಎಂದ ಮಾತ್ರಕ್ಕೆ ಎಲ್ಲವೂ ಒಳ್ಳೆಯದಲ್ಲ ; ಹೊಸದೆಂದ ಮಾತ್ರಕ್ಕೆ ಯಾವ ಕಾವ್ಯವನ್ನೂ ಅಲ್ಲಗಳೆಯ ಬಾರದು. ಸಂತರು ಎಲ್ಲವನ್ನೂ ಪರೀಕ್ಷೆಮಾಡಿ ಯೋಗ್ಯ

ವಾದುದನ್ನು ಮಾತ್ರ ಅಂಗೀಕರಿಸುವರು. ಮೂರ್ಖನು ಮಾತ್ರ ತನ್ನ ಬುದ್ಧಿಯನ್ನು ಇತರರು ಸೆಳೆದಂತೆ ಹರಿಯ ಬಿಟ್ಟು ಮೋಸಹೋಗುತ್ತಾನೆ. "*

ಇತಿಹಾಸ ಅವಿಚ್ಛಿನ್ನವಾದದ್ದು ; ಮುನ್ನಡೆಯ ಸ್ವಭಾವ ಉಳ್ಳದ್ದು. ಸಾಂಪ್ರದಾಯಿಕ ಅವಿಚ್ಛಿನ್ನತೆ ಅಂದರೆ ಯಾಂತ್ರಿಕ ಪುನರಾರ್ವತನೆ ಎಂದು ಅರ್ಥವಲ್ಲ ; ಅದು ನಮ್ಮ ಪರಿವರ್ತನೆ. ಯಾವುದೋ ಹಿಂದಿನ ಕಾಲದ ಮಾದರಿ ವಿಚಾರಗಳಿಂದ ಅಮೂಲ್ಯವಾದ ಧರ್ಮಸತ್ತ್ವವನ್ನು ಮುಕ್ತಗೊಳಿಸಿ ನಮ್ಮ ಕಾಲದ ನುಡಿ ನೀತಿಗಳಿಗೆ ಅನುಸಾರವಾಗಿ ಅದನ್ನು ಅಳವಡಿಸಿಕೊಳ್ಳುವ ಕೆಲಸ ನಮ್ಮದು. ತಾರತಮ್ಯ ಭಾವನೆಗೆ ಅವಕಾಶಕೊಡದೆ ಎಲ್ಲ ಸಚೇತನ ಮತಗಳನ್ನೂ ಒಂದುಗೂಡಿಸುವ ಸಮಾನವಾದ ಆದರ್ಶಗಳನ್ನು ಸೃಷ್ಟಿಸಬೇಕು. ಕಾಲ ಎಲ್ಲವನ್ನೂ ಬದಲಾವಣೆ ಮಾಡುತ್ತದೆ. ನಮ್ಮ ಅಂತರಾತ್ಮ ನಮ್ಮನ್ನು ಸತ್ಯದ ಕಡೆ ನಡೆಸಬೇಕು.

---

*ಪುರಾಣಮಿತ್ಯೇವ ನ ಸಾಧು ಸರ್ವಂ ;
ನ ಚಾಪಿಕಾವ್ಯಂ ನವಮಿತ್ಯವದ್ಯಮ್
ಸಂತಃ ಪರೀಕ್ಷ್ಯ ಅನ್ಯತರತ್ ಭಜಂತೆ
ಮೂಢಾಃ ಪರಪ್ರತ್ಯಯನೇಯ ಬುದ್ಧಿಃ :, (I,2 )

೨

# ನಂಬಿಕೆಯ ಪ್ರತಿಬಂಧಕಗಳು

ಇಂದಿನ ಅನಾಸ್ತಿಕ್ಯ ಸಮಸ್ಯೆಗೆ ಕಾರಣವಾದ ಪ್ರಮುಖ ಪ್ರಭಾವ ವೈಜ್ಞಾನಿಕ ದೃಷ್ಟಿಯ ಬೆಳವಣಿಗೆ. ಪ್ರಬುದ್ಧವಾದ ಸಾಮಾಜಿಕ ಅನುತಾಪವನ್ನೂ ಮತ್ತು ಜಗತ್ತಿನ ಐಕ್ಯತೆಯನ್ನೂ ಪೋಷಿಸದ ಮತ ಧರ್ಮಕ್ಕೆ ಉಳಿಗಾಲವಿಲ್ಲವೆಂಬುದು ನಿಶ್ಚಯ.

## ೧. ಮತಧರ್ಮ ಮತ್ತು ವಿಜ್ಞಾನ

ತಳಮಳಿಸುವ ಜಿಜ್ಞಾಸೆ, ಯಾವುದನ್ನೂ ಬರಿಯ ವಿಶ್ವಾಸದ ಆಧಾರದ ಮೇಲೆ ಒಪ್ಪಿಕೊಳ್ಳಲು ಒಡಂಬಡದ ವೈಜ್ಞಾನಿಕ ಮನೋಭಾವ, ಎಲ್ಲ ಸಾಹಸಮಯ ಪ್ರಯೋಗಗಳಿಗೂ ಪ್ರೋತ್ಸಾಹಕಾರಕವಾಗಿದೆ ಎಂಬುದರಲ್ಲಿ ಸಂದೇಹವಿಲ್ಲ. ವಿಮರ್ಶೆಗೆ, ಸೂಕ್ಷ್ಮಪರೀಕ್ಷೆಗೆ ಒಳಪಡಿಸದೆ ಯಾವ ಅಭಿಪ್ರಾಯವನ್ನೂ ಇದು ಅಂಗೀಕರಿಸದು. ಪ್ರಶ್ನೆಗಳನ್ನು ಕೇಳಲು, ಸಂಶಯಗಳನ್ನು ಮಂಡಿಸಲು ಸ್ವಾತಂತ್ರ್ಯ ಪಡೆದಿದೆ. ಈ ಚಿತ್ತವೃತ್ತಿ ನಮ್ಮ ಪ್ರಾಕೃತ ಸನ್ನಿವೇಶಗಳ ಮೇಲೆ ನಮಗೆ ವಿಸ್ಮಯ ಕಾರಕವಾದ ಆಧಿಪತ್ಯವನ್ನೂ ಒದಗಿಸಿ ಕೊಟ್ಟಿದೆ.

ಸಾಮಾನ್ಯವಾಗಿ ಮತಧರ್ಮ ವಿಜ್ಞಾನದ ಈ ಮನೋಭಾವಕ್ಕೆ ವಿರೋಧವಾಗಿಯೇ ಇದೆ. ವಿಜ್ಞಾನದ ರೀತಿ ಪ್ರಾಯೋಗಿಕ, ಮತಧರ್ಮದ ಪದ್ಧತಿ ಪ್ರಮಾಣಬದ್ಧ. ವಿಜ್ಞಾನ ಶಬ್ದ ಪ್ರಮಾಣದಮೇಲೆ ಆಧಾರ ಪಡುವುದಿಲ್ಲ. ಸುಶಿಕ್ಷಿತ ಮನಸ್ಸು ಒಪ್ಪುವ ಸಿದ್ಧವಾದ ವಾಸ್ತವಿಕ ನಿದರ್ಶನಗಳಮೇಲೆ ನಿಲ್ಲುತ್ತದೆ. ವಿಚಾರಕ್ಕೆ ಅಥವಾ ಜಿಜ್ಞಾಸೆಯ ಸ್ವಾತಂತ್ರ್ಯಕ್ಕೆ ಯಾವ ತಡೆಯನ್ನೂ ವಿಜ್ಞಾನ ಮನ್ನಿಸುವುದಿಲ್ಲ. ಹೊಸ ಅನುಭವ, ಹೊಸ ಜ್ಞಾನವನ್ನು ಯಾವಾಗಲೂ ಸ್ವಾಗತಿಸುತ್ತದೆ. ನಿಜವಾದ ವಿಜ್ಞಾನಿ ಎಂದಿಗೂ ಸ್ವಮತಾಭಿಮಾನಕ್ಕೆ ಶರಣುಹೋಗುವುದಿಲ್ಲ. ಅವನ ಮನೋಭಾವದಲ್ಲಿ ನಮ್ರತೆ ಇದೆ, ಆತ್ಮ ಪರೀಕ್ಷೆ ಇದೆ. ಇತರರಿಂದ ಕಲಿಯಲು ಎಂದೂ ಸಿದ್ಧವಾಗಿರುತ್ತದೆ. ವಿಚಾರಸ್ವಾತಂತ್ರ್ಯಕ್ಕೆ ನಾವು

ಬೆಲೆ ಕೊಡುವುದಾದರೆ, ಇದು ಮತಧರ್ಮದಲ್ಲಿ ಪ್ರಧಾನವಾದ ಶಾಸನಾತ್ಮಕ ಪ್ರಮಾಣಕ್ಕೆ (Authoritarianism) ವಿರುದ್ಧವಾದದ್ದು.

ಇದಲ್ಲದೆ, ವೈಜ್ಞಾನಿಕ ಅಭಿಪ್ರಾಯಗಳಲ್ಲಿ ಸರ್ವವ್ಯಾಪಕತೆಯ ಅಂಶ ಒಂದಿದೆ. ಇದು ಮತಧರ್ಮದ ಸಂಪ್ರದಾಯದಲ್ಲಿ ಕಾಣುವುದಿಲ್ಲ. ವೈಜ್ಞಾನಿಕರು ರಾಷ್ಟ್ರೀಯ ಅಥವಾ ಭೌಗೋಳಿಕ ಸರಹದ್ದುಗಳನ್ನು ಅಂಗೀಕರಿಸುವುದಿಲ್ಲ. ಇತರ ದೇಶಗಳಲ್ಲಿ ತಮ್ಮಂತೆ ವ್ಯಾಸಂಗ ಮಾಡುತ್ತಿರುವವರೊಡನೆ ವಿಚಾರವಿನಿಮಯ ಮಾಡಿಕೊಳ್ಳುತ್ತಾರೆ. ವಿಜ್ಞಾನ ಮನೋಭಾವಕ್ಕೆ ರಹಸ್ಯ ಅಸಹ್ಯವಾದದ್ದು.

ಪ್ರತಿ ಮತಧರ್ಮವೂ ತನ್ನ ಶಾಸ್ತ್ರ ಒಂದು ವಿಶೇಷವಾದ ರೀತಿಯಲ್ಲಿ ದೇವರ ಮಾತೆಂದೂ ದೋಷ ರಹಿತವೆಂದೂ ಪ್ರತಿಪಾದಿಸುತ್ತದೆ. ಶಾಸ್ತ್ರದ ನಿರ್ದುಷ್ಟತೆ ವೈಜ್ಞಾನಿಕ ದೃಷ್ಟಿಗೆ ಸರಿಯೆನಿಸುವುದಿಲ್ಲ. ಶಾಬ್ದಿಕ ನಿರ್ದುಷ್ಟತೆಯನ್ನು ಪೂರ್ವಾಚಾರದವರು ಹೊರತು ಮತ್ತೆ ಯಾರೂ ಈಗ ಒತ್ತಿ ಹೇಳುವುದಿಲ್ಲ. ದೋಷಾವಿಷ್ಟವಾದ ಮನಸ್ಸು ಹೃದಯಗಳ ಮೇಲೆ ಈಶ್ವರ ಆದೇಶದ ಸಂದೇಶದ ಪರಿಣಾಮವಾದ ಶಾಸ್ತ್ರಗಳು ಸಂಪೂರ್ಣವಾಗಿ ದೋಷರಹಿತವೆಂದು ಭಾವಿಸಲು ಸಾಧ್ಯವಿಲ್ಲ.

ಶಾಸ್ತ್ರದ ಅನೇಕ ವಾಕ್ಯಗಳನ್ನು ಶಬ್ದಶಃ ಅರ್ಥಮಾಡಿಕೊಳ್ಳಲಾಗದು. ಉದಾಹರಣೆಗೆ, ಜೆನಿಸಿಸ್ (genesis) ನ ಕಾಲನಿರ್ಣಯಗಳೂ, ಕ್ರಮಿಕ ಮತ್ತು ಅಕಸ್ಮಿಕ ಸೃಷ್ಟಿಕ್ರಮ, ಘನಸ್ಥಿತಿಯಸ್ವರ್ಗ, ಸ್ಥಾವರವಾದ ಪೃಥ್ವಿ ಇವುಗಳನ್ನು ಶಬ್ದಶಃ ಅರ್ಥಮಾಡಿಕೊಂಡರೆ ಇವು ವಿಜ್ಞಾನ ನೀಡುವ ತಿಳುವಳಿಕೆಗೆ ನೇರ ವಿರೋಧವಾಗಿವೆ. ಆದರೂ ಮತಧರ್ಮಗಳ ಐತಿಹಾಸಿಕ ಅಥವಾ ಪಾರಮಾರ್ಥಿಕ ಆಧಾರಗಳನ್ನೂ ತೊಡೆದು ಹಾಕಿದರೆ ಮತಧರ್ಮ ಉಳಿಯುವುದಿಲ್ಲ. ಮತಧರ್ಮದಲ್ಲಿ ರೂಢವಾಗಿರುವ ದೃಢೋಕ್ತಿ, ಪರಂಪರೆ, ಪುರಾಣಕಥೆ, ಇವುಗಳನ್ನು ತೆಗೆದುಹಾಕಿಬಿಟ್ಟರೆ ಅದನ್ನು ಬರಿದುಮಾಡಿದಂತಾಗುತ್ತದೆ. ಆದ್ದರಿಂದಲೇ ಮತಧರ್ಮಪ್ರವರ್ತಕರು ಶಾಸ್ತ್ರದಲ್ಲಿ ಶ್ರದ್ಧೆಯನ್ನು ಕಡಮೆ ಮಾಡುವ ಪ್ರಯತ್ನಗಳನ್ನು ತೀವ್ರವಾಗಿ ಖಂಡಿಸುತ್ತಾರೆ.

## ೨. ತುಲನಾತ್ಮಕ ಮತಧರ್ಮ

ತುಲನಾತ್ಮಕ ಮತಧರ್ಮದ ಅಧ್ಯಯನದಿಂದ ನಂಬಿಕೆಗಳ, ಆಚರಣೆ

ಗಳ, ದಿಗ್ಭ್ರಮೆಗೊಳಿಸುವಷ್ಟು ವೈವಿಧ್ಯವೂ ಪರಸ್ಪರ ವಿರೋಧಿಗಳೆಂದೆನಿಸಿ ಕೊಳ್ಳುವ ಧರ್ಮಗಳಲ್ಲಿರುವ ಅನೇಕ ಸಾದೃಶ್ಯಾಂಶಗಳೂ ಅವತಾರ, ಪವಾಡ ಕ್ರಿಯೆಗಳು, ಉತ್ಸವಗಳು ಇವುಗಳಲ್ಲಿ ಅರ್ಥವತ್ತಾದ ಸಮಾನ ಅಂಶಗಳೂ ಜೀವನದ ಪ್ರತ್ಯುಪಕ್ರಮ ಸೂಚಕವಾದ ವಸಂತೋತ್ಸವಗಳೂ, ಅನೇಕ ಮತಧರ್ಮಗಳಲ್ಲಿ ಕಂಡುಬರುತ್ತವೆ. ಅವು ಸ್ತುತಿ ಸ್ತೋತ್ರಗಳ ಕೃತಜ್ಞತಾ ಪ್ರಕಾಶದ ಸಮಯ. ನಮ್ಮ ಕಣ್ಣುಗಳನ್ನೂ ಹೃದಯಗಳನ್ನೂ ಪರ್ವತಾಗ್ರದ ಕಡೆಗೆ ಚಾಚುತ್ತೇವೆ, ಶ್ರದ್ಧೆ ಕೆರಳುತ್ತದೆ. ಶಕ್ತಿ ಸಂತೋಷಗಳು ವೃದ್ಧಿ ಯಾಗುತ್ತವೆ. ಹಿಂದುಗಳು ಇದನ್ನು ಹೋಳಿ ಹಬ್ಬವೆಂದು ಆಚರಿಸು ತ್ತಾರೆ. ಯಹೂದ್ಯರು ಇದನ್ನು ಬಂಧನದಿಂದ ಮುಕ್ತಗೊಳಿಸುವ ಈಶ್ವರಾನು ಗ್ರಹವಿತರಣದ, ಪ್ಯಾಸ್ ಓವರ್ ಹಬ್ಬವೆಂದು ಕರೆಯುತ್ತಾರೆ. ಕ್ರೈಸ್ತರಿಗೆ ಇದು ಏಸುವಿನ ಪುನರುತ್ಥಾನದ ದಿನ, ಮೃತ್ಯುವನ್ನು ಜಯಿಸಿದ ದಿನ. ವಸಂತದ ಹಬ್ಬ ಪ್ರಾಕೃತಲೋಕದ ಪ್ರತ್ಯುಪಕ್ರಮ ಜೀವನದ ಸೂಚಕ ಮಾತ್ರವಲ್ಲ ಅಪ್ರಾಕೃತ ದಿವ್ಯಲೋಕದ ಸ್ಫುರಣಸ್ಮಾರಕವೂ ಆಗಿದೆ. ಗ್ರೀಕರ ಪುರಾಣದ ತಾರಕ–ದೇವತೆಗಳ ಕಲ್ಪನೆಗೂ ಶಿಲುಬೆಗೇರಿ ಪುನರುತ್ಥಾನಸಾದ ಏಸುವಿನ ಕಲ್ಪನೆಗೂ ಸಾದೃಶ್ಯಗಳಿವೆ.

## ೩. ಮಾನವ ವ್ಯಕ್ತಿ ಮತ್ತು ಯಂತ್ರ ತಂತ್ರ (Technology) ದ ವೃದ್ಧಿ

ವಿಜ್ಞಾನ ನಮಗೆ ಒದಗಿಸಿರುವ ಸತ್ಯನಿರ್ಣಯದ ಪ್ರಮಾಣವನ್ನು ನಾವು ಅಂಗೀಕರಿಸಲೇ ಬೇಕಾಗುವಂತೆ ನಾವು ಬೆಳೆದಿರುವ ವಾತಾವರಣ ಪ್ರೇರೇಪಿಸುತ್ತಿದೆ. ಜೀವಶಾಸ್ತ್ರ, ಮನಃಶಾಸ್ತ್ರ, ಇತಿಹಾಸ ಇವುಗಳಲ್ಲಿನ ಸಂಶೋಧನೆಗಳು ಮಾನವನು ನರಪ್ರಚೋದನೆಯ ಫಲವಾಗಿ ಉಂಟಾದ ನಿರಿಚ್ಛಾ ಪ್ರತಿಕ್ರಿಯೆಯ ಜಂತುವೆಂದೂ, ಸನ್ನಿವೇಶಕ್ಕೆ ಸಂಪೂರ್ಣವಶ್ಯ ನೆಂದೂ, ವಿಜ್ಞಾನದ ಪ್ರಯೋಗಗಳಿಂದ ಹೇಗೆ ಬೇಕೋ ಹಾಗೆ ರೂಪಿಸ ಲ್ಪಡಬಲ್ಲನೆಂದೂ, ಅವುಗಳಿಗೆ ಅಧೀನನೆಂದೂ ಸೂಚಿಸುತ್ತಿವೆ.

ಯಂತ್ರ ತಂತ್ರದ ಸಲುವಾಗಿ ಹುಟ್ಟಿದ ಹೊಸ ಆರ್ಥಿಕ ವ್ಯವಸ್ಥೆಗಳಲ್ಲಿ ವ್ಯಕ್ತಿಯು ತನ್ನ ವೈಶಿಷ್ಟ್ಯವನ್ನೂ ಇತರರೊಡನೆ ಸಾಮರಸ್ಯವನ್ನೂ ಕಳೆದು ಕೊಳ್ಳುತ್ತಿದ್ದಾನೆ. ನಮ್ಮ ಸಮಾಜ ಅತಿ ಶೀಘ್ರವಾಗಿ ಬೃಹದಾಕಾರದ

ಸಂಸ್ಥೆಯಾಗುತ್ತಿದೆ. ಸರಳ ವ್ಯಕ್ತಿಗತ ಮಾನವಸಂಬಂಧಗಳನ್ನು ಕಳೆದುಕೊಳ್ಳುತ್ತಿದೆ. ಕುಟುಂಬದ, ಗ್ರಾಮದ, ಪ್ರಾದೇಶಿಕ ಅಧಿಕಾರದ, ದೇವಸ್ಥಾನದ ಚರ್ಚು ಮಸೀದಿಗಳ ಪ್ರಭಾವ ಕುಂದುತ್ತಿದೆ. ಜನರು ನೆಮ್ಮದಿ ತಪ್ಪಿದವರಾಗಿದ್ದಾರೆ, ಚಂಚಲರಾಗಿದ್ದಾರೆ. ವಿಶ್ರಾಮವೆನ್ನುವುದಿಲ್ಲ. ಯಾಂತ್ರಿಕ ಪ್ರಗತಿಯಿಂದ ಉತ್ಪನ್ನವಾದ ಅನುಕೂಲಗಳಲ್ಲಿ ಮುಳುಗಿದವರಂತೂ ಆತ್ಮಸಂಯಮದ ಪ್ರಯತ್ನ ಕೈಗೊಳ್ಳಲು ಅಶಕ್ತರಾಗಿದ್ದಾರೆ. ಪ್ರಾಕೃತಿಕ ಜೀವನದಲ್ಲಿ ಸುಖತರುವ ಅನೇಕ ಯಾಂತ್ರಿಕ ಸಲಕರಣೆಗಳನ್ನು ನಂಬಿದಷ್ಟೂ ನಾವು ನಮ್ಮ ಅಂತರಾತ್ಮನಿಂದ ದೂರವಾಗುತ್ತಿರುತ್ತೇವೆ.

ಸಂತೋಷವನ್ನುಂಟುಮಾಡುವ ಯಂತ್ರಗಳಂತೆ ಜನ ಸಾಮಾನ್ಯರು ಒಳ್ಳೆಯವರೂ ಅಲ್ಲ ಕೆಟ್ಟವರೂ ಅಲ್ಲ. ಯಂತ್ರಗಳು ನಮ್ಮ ಜೀವನವನ್ನು ತೊಡಕುಗೊಳಿಸಿವೆ. ನಮ್ಮ ಬುದ್ಧಿಶಕ್ತಿ ನಮ್ಮ ಮನಸ್ಸಿಗೆ ನೆಮ್ಮದಿ ಇಲ್ಲದಂತೆ ಮಾಡಿದೆ. ಸಮಚಿತ್ತತೆ, ನೆಚ್ಚಿಕೆ, ಪ್ರಸನ್ನತೆಗಳು ನಮ್ಮ ಕೈಮೀರಿದಂತಾಗಿವೆ. ವ್ಯಕ್ತಿ ಜನಸಮುದಾಯದಲ್ಲಿ ಮುಳುಗಿ ತನಗೆ ರಕ್ಷಣೆ ಸಿಕ್ಕಿತೆಂದು ಭ್ರಮಿಸುತ್ತಾನೆ. ಸಮುದಾಯ ಎಂಬ ಮಹಾಭೂತ ನಮ್ಮ ಸಾರ್ವಜನಿಕ ವ್ಯವಹಾರಗಳ ಮೇಲೆ, ಕೈಗಾರಿಕೆ, ವಾಣಿಜ್ಯ, ಸಾಮಾಜಿಕ ಜೀವನ, ರೀತಿನೀತಿಗಳ ಮೇಲೆ ಸುಳಿದಾಡುತ್ತಿದೆ. ಸಮುದಾಯದಲ್ಲಿನ ಮಹದಪಾಯ ಸದ್ವಿಚಾರ ಅಥವಾ ದುರ್ವಿಚಾರವಲ್ಲ, ಸಂಪೂರ್ಣ ವಿಚಾರಶೂನ್ಯತೆ. ಮಂದಿಯ ಮನಸ್ಸಿಗೆ ಮಂದಟ್ಟುಗೊಳಿಸಬೇಕೆಂದು ಅವಲಂಬಿಸಲ್ಪಟ್ಟಿರುವ ಸಾಧನೋಪಾಯಗಳ ಪರಿಣಾಮದಿಂದ ನಮ್ಮ ಜೀವನ ನಿಷ್ಕ್ರಿಯವಾಗಿದೆ; ಮೂಗೊಪ್ಪಿಗೆಗೆ ಈಡುಮಾಡಿದೆ; ಸಂಪ್ರದಾಯ ಶರಣರನ್ನಾಗಿ ಮಾಡಿದೆ. ಬುದ್ಧಿಗೆ ಸೆಡೆತ ಹಿಡಿದು, ಸಂಕಲ್ಪಶಕ್ತಿ ಸತ್ತ್ವಹೀನವಾಗಿದೆ. ನಿರ್ಭೀತ ಸ್ವತಂತ್ರ ವಿಚಾರ ಬಿಟ್ಟು ಬರಿಯ ಮಾತುಗಳಿಗೆ ಅಪಕ್ವ ಭಾವಗಳ ಬಾಹ್ಯ ಚಿನ್ಹೆಗಳಿಗೆ ಸೋಲುತ್ತಿದ್ದೇವೆ. ನಾವು ಸಾಮೂಹಿಕ ರಾಗಾವೇಶಗಳಿಗೆ ಪರವಶರಾಗುತ್ತಿರುವುದನ್ನು ಸಮುದಾಯದ ಸಮಷ್ಟಿವಿವೇಕವೆಂದು ಸುಳ್ಳು ಹೆಸರಿನಿಂದ ಕರೆಯುತ್ತಿದ್ದೇವೆ. ಜನರನ್ನು ಜಾಲಾಡುವವರು ಹೆಚ್ಚು ಪ್ರಭಾವವನ್ನು ಸಂಪಾದಿಸಿಕೊಳ್ಳುತ್ತಾರೆ. ರಾಜಕೀಯ ಎನ್ನುವುದು ಮಂದಿಯ ಮನಸ್ಸಿನೊಡನೆ ನಡೆಯುವ ಜೂಜಾಗಿದೆ. ಬ್ಯಾಸ್ಟಿಲ್ ಮೇಲೆ ಕಲ್ಲಿನಮಳೆ

ಸುರಿಸಿದವರು ಮಂದಿ ; ಹಿಟ್ಲರನ ಸುರಾಪಾನದಂಥ ಸಾಮೂಹಿಕ ಉನ್ಮಾದದಲ್ಲಿ ತಲೆ ಕೆಡಿಸಿಕೊಂಡವರೂ ಜನಸಮುದಾಯವೇ. ಈ ವಾದ ಆ ವಾದ ಅನ್ನುವ ಬೌದ್ಧಿಕ ಘರ್ಷಣೆಯಲ್ಲಿ ಪರವಶರಾದವರು ಮಂದಿ. ತಮ್ಮ ಹಕ್ಕೋಟಿಗೆ ತಂದುಕೊಳ್ಳುವ ಸಲುವಾಗಿ ಸಾರ್ವಜನಿಕ ಅಭಿಪ್ರಾಯಗಳನ್ನು ರೂಪಿಸಲು ಪ್ರಯತ್ನಿಸುವ ಮುಖಂಡರು ಪ್ರಚಾರದ ತಾಂತ್ರಿಕ ಸಾಧನಗಳನ್ನೆಲ್ಲಾ ಉಪಯೋಗಿಸಿ ಕೊಳ್ಳುತ್ತಿದ್ದಾರೆ. ರೇಡಿಯೋ ಕೇಳಿದರೆ, ಟೆಲಿವಿಷನ್ ಕಾರ್ಯಕ್ರಮವನ್ನು ಅನುಸರಿಸಿದರೆ, ಇವುಗಳ ಪ್ರಭಾವಕ್ಕೆ ಒಳಗಾದ ಜನಸಮುದಾಯ ಒಂದು ರಾಷ್ಟ್ರದ ವಿದೇಶನೀತಿಯನ್ನಾಗಲಿ, ಒಬ್ಬ ವಿಜ್ಞಾನಿಯ ಶೀಲವನ್ನಾಗಲಿ, ಒಬ್ಬ ಕಲಾವಿದನ ಕಲಾಸೃಷ್ಟಿಯನ್ನಾಗಲಿ, ಒಂದು ಸ್ವಯಂಯಾನದ ಸ್ವರೂಪವನ್ನಾಗಲಿ ಹೇಗೆ ನಿರ್ಧರಿಸುತ್ತಿದ್ದಾರೆಂಬುದು ಅರ್ಥವಾಗುತ್ತದೆ.

ಯಾಂತ್ರಿಕ ನಾಗರಿಕತೆಯಲ್ಲಿ, ಮಂದೆಯಂತಹ ಮಂದಿಯ ಸಮೂಹದಲ್ಲಿ ವ್ಯಕ್ತಿ ತನ್ನ ವೈಶಿಷ್ಟ್ಯವನ್ನೂ ವ್ಯಕ್ತಿತ್ವವನ್ನೂ ಕಳೆದುಕೊಂಡವನಾಗುತ್ತಾನೆ. ನಿರ್ಜೀವ ವಸ್ತುಗಳು ಜೀವದ ಮೇಲೆ ಆಧಿಪತ್ಯ ನಡೆಸುತ್ತವೆ. ಗುಣವಂತರಾದ ಮಾನವ ಚೇತನರು ಸಂಖ್ಯಾಶಾಸ್ತ್ರದ ಅಂಕಿ ಅಂಶಗಳಾಗುತ್ತಾರೆ. ವಿಶ್ವಾಸವಿಡುವುದು, ದಯೆಯಿಂದ ನಡೆದುಕೊಳ್ಳುವುದು, ಸಹಕರಿಸುವುದು, ಇತರರ ಸುಖದುಃಖಗಳಲ್ಲಿ ಭಾಗಿಯಾಗುವುದು, ಪ್ರತಿಯಾಗಿ ಮಿಡಿಯುವುದು ಇವು ಮಾನವಸಹಜ ಗುಣಗಳು. ಹಾಗೆಯೇ ಪ್ರಜಾವಾತ್ಸಲ್ಯ ಉಳ್ಳವರಾಗಿ ತಮ್ಮ ಅಭಿಪ್ರಾಯಗಳಿಗೆ ಒಡಂಬಡದವರೊಡನೆಯೂ ಸಹ ವಿಚಾರವಿನಿಮಯ ಮಾಡಿಕೊಳ್ಳಲು ಹಿಂಜರಿಯದಿರುವುದು; ನಮ್ಮ ನೆರೆಯವರಲ್ಲಿ ನಂಬಿಕೆ ಇಟ್ಟು ಶತ್ರುಗಳ ವಿಷಯದಲ್ಲಿಯೂ ಔದಾರ್ಯದಿಂದ ನಡೆದುಕೊಳ್ಳುವುದು. ಮಾನವೀಯತೆಯನ್ನು ನಾವು ಮರಳಿ ಸಂಪಾದಿಸಿಕೊಂಡಾಗ ಮಾತ್ರ ದರ್ಪಯುತ ಅಧಿಕಾರಕ್ಕೆ ನಾವು ಮಣಿಯದೆ ಸಾಮೂಹಿಕ ಬುದ್ಧಿವಿಕಲ್ಪಕ್ಕೆ ಒಳಗಾದ ಕೆಲವು ರಾಷ್ಟ್ರಗಳನ್ನಾದರೂ ದುರವಸ್ಥೆಯಿಂದ ಪಾರಾಗಿಸಲು ಶಕ್ಯವಾದೀತು. ಆದರೆ ಆಧುನಿಕ ಸಮಾಜದ ಯಾಂತ್ರಿಕ ವ್ಯವಸ್ಥೆಯಲ್ಲಿ ವ್ಯಕ್ತಿ ಕ್ರಮೇಣ ಕ್ಷೀಣ ದೆಸೆಯನ್ನು ಹೊಂದಿ ಮಾನವನಲ್ಲಿ ಅಂತರ್ಗತವಾದ ಆತ್ಮಶಕ್ತಿಯ

ವಿಷಯವಾಗಿ ಸಂಶಯಗ್ರಸ್ತನಾಗುತ್ತಾನೆ.

ಆಧುನಿಕ ಸರಕಾರಗಳು ಮಾನವನ ಆತ್ಮಗೌರವದ ಮೇಲೆ ಧಾಳಿಮಾಡಿ ಅದನ್ನು ನಾಶಗೊಳಿಸುತ್ತಿವೆ. ಸ್ವಲ್ಪ ಸ್ವಲ್ಪವಾಗಿ ಮಾನವರನ್ನು ನಿರ್ಜೀವವಸ್ತುಗಳನ್ನಾಗಿ ಪರಿವರ್ತಿಸಿ ಅವರಲ್ಲಿ ಆತ್ಮಪ್ರತ್ಯಯವನ್ನು ಕಳೆದು ನಿಸ್ಸಹಾಯಕರನ್ನಾಗಿ ಮಾಡುತ್ತವೆ. ಈ ಪಾರತಂತ್ರ್ಯವು ಬುದ್ಧಿಯ ಮಟ್ಟದಲ್ಲಿ ಮಾತ್ರವಲ್ಲ, ಆತ್ಮದ ಗಭೀರ ಅಂತರಾಳದಲ್ಲೂ ಘಟಿಸುತ್ತದೆ. ಇಂಥವರೇ ಆತ್ಮನಾಶಮಾಡಿಕೊಂಡವರು. ಉಪನಿಷತ್ತು ಹೇಳುವಂತೆ 'ಆತ್ಮಹನೋ ಜನಾಃ'. ಆತ್ಮಲಾಭವೆಂದರೆ ಆತ್ಮಸಾಕ್ಷಿಯಲ್ಲಿ ನಂಬಿಕೆ. ಯಾರೂ ಯಾರ ಬಾಹ್ಯಶಕ್ತಿಯಿಂದಲೂ ವಿನಾಶಗೊಳಿಸಲಾಗದ, ಯಾರಿಂದಲೂ ಕಸಿದುಕೊಳ್ಳಲಾಗದ ಅಂತರಂಗಿಕ ಪ್ರಭುತ್ವ. ಆತ್ಮದಿಂದ ಆತ್ಮದ ಮೇಲಿನ ಒಡೆತನ. ನಮ್ಮಲ್ಲಿ ಅಸ್ತಿತ್ವದ ಮಟ್ಟಒಂದಿದೆ, ಸತ್ತ್ವ ಒಂದಿದೆ, ಪರತತ್ವದ ಒಂದುಕಿಡಿ ಇದೆ. ಆಧುನಿಕ ಯಾಂತ್ರಿಕ ವಿಜ್ಞಾನ ನಮ್ಮನ್ನು ನಿರ್ಜೀವ ವಸ್ತುಗಳ ವರ್ಗಕ್ಕೆ ಸೇರಿಸಲು ಎಷ್ಟು ಪ್ರಯತ್ನಪಟ್ಟರೂ ನಾವು ಆ ಪ್ರಪಂಚಕ್ಕೆ ಸಂಪೂರ್ಣವಾಗಿ ಒಳಗಾಗಲಾರೆವು. ಅಣ್ವಸ್ತ್ರಗಳ ಪ್ರಯೋಗಕ್ಕೂ ಮಾನವನ ಅಧಃಪತನಕ್ಕೂ ಒಂದು ರಹಸ್ಯವಾದ ಭಾಂದವ್ಯವಿದೆ. ನೈತಿಕ ಋಜುತ್ವವನ್ನು ನಾವು ಕಾಪಾಡಿಕೊಳ್ಳಬೇಕೆಂದು ಬಯಸುವುದಾದರೆ, ಯಾಂತ್ರಿಕ ಪ್ರಗತಿಗೆ ಸಮತೂಕವಾಗಿ ಆತ್ಮಸಂಯಮ ಬೆಳೆಯಲೇಬೇಕು.

**೪. ತಾರ್ಕಿಕಅನುಭವೈಕವಾದ** (Logical Empiricism)

ಹೊಸ ಅನುಭವೈಕ ವಾದಿಗಳು ಅಧ್ಯಾತ್ಮಶಾಸ್ತ್ರಗಳನ್ನೆಲ್ಲ ನಿರಾಕರಿಸುತ್ತಾರೆ. ಇಂದ್ರಿಯ ಪ್ರತ್ಯಕ್ಷವಲ್ಲದ, ವೈಜ್ಞಾನಿಕ ಯಂತ್ರಗಳಮೂಲಕವೂ ಇಂದ್ರಿಯಗಳಿಗೆ ಗೋಚರವಲ್ಲದ ಯಾವುದೂ ಸತ್ಯವೆಂದು ಇವರು ಅಂಗೀಕರಿಸುವುದಿಲ್ಲ. ನಮ್ಮ ಚಕ್ಷುರಿಂದ್ರಿಯಕ್ಕೆ ಸ್ಪರ್ಶೇಂದ್ರಿಯಕ್ಕೆ ಗೋಚರವಾಗುವುದು ಭೌತದ್ರವ್ಯ. ಯಾವದು ಇಂದ್ರಿಯಾನುಭವ ವೇದ್ಯವೋ ಅದು ಮಾತ್ರ ಸತ್ಯ. ಮೌಲ್ಯಗಳಜ್ಞಾನ, ಸೌಂದರ್ಯದ ಅನುಭವ ಇವು ಸತ್ಯಸ್ವರೂಪಕ್ಕೆ ಅಸಂಗತವಾದದ್ದು. ವಿಜ್ಞಾನವೇ ಸ್ವಯಂಪೂರ್ಣವೆಂದು ಭಾವಿಸುವ ಕಾಲದಲ್ಲಿ ನಾವಿದ್ದೇವೆ. ಪರಮಾರ್ಥ ಪ್ರಶ್ನೆಗಳನ್ನು ಕೇಳು

ವುದು ವಿವೇಕಶೂನ್ಯತೆಯ ಕುರುಹೆಂದೂ ಈ ಪ್ರಶ್ನೆಗಳಿಗೆ ಎಂದಿಗೂ ಉತ್ತರಗಳು ಸಿಗಲಾರದೆಂದೂ ಅವನ್ನು ತಳ್ಳಿಹಾಕುತ್ತೇವೆ. ಮಾನವ ಚೇತನರನ್ನು ಸಂಕೀರ್ಣಯಂತ್ರಗಳೆಂದು ಭಾವಿಸಿ ಸಹಜವಾದ ಅವರ ಸಂತಾಪ ಸಂತೋಷಗಳನ್ನು ವಿಜ್ಞಾನಪೂರ್ವಯುಗದ ಅವಶೇಷಗಳೆಂದು ಭಾವಿಸುತ್ತಿದ್ದೇವೆ. ಈ ಗೊಡ್ಡುಸ್ತಿಮಿತತೆಯ ಭೂಮಿಕೆಯಲ್ಲಿ ನಮಗೆ ಗೋಚರವಾಗುವ ಈ ಪ್ರಪಂಚವೊಂದೇ ಸತ್ಯವೆಂದು ನಟಿಸುತ್ತೇವೆ. ಮತ ಧರ್ಮವನ್ನಂತೂ ಕೊಂಚಕೊಂಚವಾಗಿ ಅಳಿಸಿಹಾಕುತ್ತಿದ್ದೇವೆ.

## ೫. ಮತಧರ್ಮ ಮತ್ತು ಸಮಾಜ ಸಂಬಂಧಗಳು

ಬಹಿರಂಗದಲ್ಲಿ ತೋರ್ಪಡಿಸುವ ಭಕ್ತಿಗೂ ಅಂತರಂಗದಲ್ಲಿನ ವಿಶ್ವಾಸ ಹೀನತೆಗೂ ಇರುವ ಅಂತರ ಮತಧರ್ಮದ ಅಸಮರ್ಥತೆಯನ್ನು ಸ್ಪಷ್ಟ ಪಡಿಸುತ್ತದೆ. ಬಾಹ್ಯಕರ್ಮಕಲಾಪ, ಯಾಂತ್ರಿಕ ಆಚರಣೆ ಅಥವಾ ಮತಧರ್ಮಸಿದ್ಧಾಂತಗಳಿಗೆ ಜಡವಾದ ರೀತಿಯಲ್ಲಿ ಹೂ ಗುಟ್ಟು ವುದು ಇವೇ ಮತಧರ್ಮವೆಂದು ಭ್ರಮಿಸಿದ್ದೇವೆ. ಮತಧರ್ಮದ ಬಾಹ್ಯ ಲಾಂಛನಗಳನ್ನೂ, ಶ್ರದ್ಧೆಯ ಬಾಹ್ಯಾಚಾರ ಮತಸಂಪ್ರದಾಯಗಳನ್ನೂ ಅನುಸರಿಸುವ ಬಹುಜನ ನುಡಿದವಂತೆ ನಡೆಯುವುದಿಲ್ಲ. ತಮ್ಮ ಜೀವನವನ್ನು ಅದರಂತೆ ರೂಪಿಸಿಕೊಂಡಿರುವುದಿಲ್ಲ. ನಾಟಕಾಭಿನಯದಂತೆ ಹೊರಗಿನ ರೂಪಗಳನ್ನು ಮಾತ್ರ ಅವಲಂಬಿಸುತ್ತೇವೆ.

ಶ್ರೇಷ್ಠ ಮತಧರ್ಮ ನಂಬಿಕೆಗಿಂತಲೂ ನಡತೆ ಮುಖ್ಯವೆಂದು ಒತ್ತಾಯಪೂರ್ವಕವಾಗಿ ತಿಳಿಸುತ್ತದೆ. ನಮ್ಮ ನಂಬಿಕೆಯ ವಿವರಣೆಯಿಂದ ನಮ್ಮ ಮತಶ್ರದ್ಧೆ ಪೂರ್ತಿಗೊಳ್ಳುವುದಿಲ್ಲ. ಅದರಂತೆ ಬಾಳುವುದೂ ಅದರಲ್ಲಿ ಸೇರಿದೆ. ವಿವರಣೆ ಒಂದು ಸಾಧನ ಮಾತ್ರ ಸಿದ್ಧಿಯಲ್ಲ. ನಮ್ಮನ್ನು ಒಯ್ಯಲಿರುವ ವಾಹನಕ್ಕಿಂತಲೂ ನಾವು ಸೇರಬೇಕಾದ ಗುರಿ ಮುಖ್ಯ. ಧರ್ಮನಿಷ್ಠೆ ತತ್ವದಲ್ಲಿಯೂ ಅನುಷ್ಠಾನದಲ್ಲಿಯೂ ವ್ಯಕ್ತವಾಗಬೇಕು. ಬರಿಯ ಮಾತಿನ ಪ್ರತಿಪಾದನೆಯಿಂದಲ್ಲ. ಇಂದು ನಮ್ಮ ನಂಬಿಕೆಗೂ ನಮ್ಮ ನಡತೆಗೂ ತುಂಬ ಅಂತರ ಇದೆ. ಆದರೂ ನಾವು "ಕರ್ಮವಿಲ್ಲದ ಭಕ್ತಿ ಮೃತಪ್ರಾಯವಾದದ್ದು" ಎನ್ನುತ್ತೇವೆ. ಸಂತ ಪಾಲ್ ಹೇಳುತ್ತಾನೆ. "ಪ್ರಪಂಚವನ್ನು ಅನುಕರಣೆಮಾಡಬೇಡ. ನಿನ್ನ ಮನಸ್ಸಿನ ನವೀಕರಣದಿಂದ

ನಿನ್ನ ಪರಿವರ್ತನೆ ಸಂಭವಿಸಲಿ. ಈಶ್ವರನ ಸತ್ಸಂಕಲ್ಪಕ್ಕೆ, ಎಲ್ಲ ಒಳ್ಳೆಯ ಉಪಾದೇಯವಾದ ಪರಿಪೂರ್ಣತೆಗೆ ಸಾಕ್ಷಿಯಾಗಿ ನಿಲ್ಲು" ಮತಧರ್ಮ ಪ್ರಗತಿಶೀಲವೂ ವ್ಯಾಪಕವೂ ಆಗದೇ ಹೋದರೆ ಮಾನವ ಜೀವನದ ಎಲ್ಲ ರಂಗಗಳಲ್ಲಿಯೂ ಹೊಗದೆ ಹೋದರೆ, ಎಲ್ಲ ರೀತಿಯ ಮಾನವ ಕ್ರಿಯೆಯ ಮೇಲೂ ತನ್ನ ಪ್ರಭಾವ ಬೀರದಿದ್ದರೆ, ಸತ್ಯವಾಗಲಾರದು, ಹೊರಮೆರಗು ಮಾತ್ರವಾದೀತು. ಹಾಗಿಲ್ಲದೆ ನಾವು ಮತಧರ್ಮವನ್ನು ವ್ಯಾಪಕಸ್ವರೂಪದ್ದೆಂದೂ ಅದರ ಅನುಯಾಯಿಗಳು ಅವರ ಧ್ಯೇಯಗಳಂತೆ ನಡೆದುಕೊಳ್ಳಬಲ್ಲರೆಂದೂ ನಂಬುವುದಾದರೆ ವ್ಯಕ್ತಿಯ ಮತ್ತು ಸಮಾಜದ ಪರಿಷ್ಕಾರಕ್ಕೆ ಅದು ಎಷ್ಟು ಅಮೂಲ್ಯ ಸಾಧನವೆಂಬ ತೀರ್ಮಾನ ಅನಿವಾರ್ಯವಾಗುತ್ತದೆ.

ವಿಜ್ಞಾನದ ಸಲುವಾಗಿ, ಜೀವನದ ಭೋಗ ಸಾಮಗ್ರಿಗಳು ಹೆಚ್ಚಿವೆ. ಆದರೆ ಈ ವೈಜ್ಞಾನಿಕ ಅನುಕೂಲಗಳ ಬಗೆಗೆ ಮತಧರ್ಮ ಪ್ರತಿಕೂಲ ಭಾವವನ್ನೇ ತಾಳಿದೆ. ಸ್ತ್ರೀಯರ ಪ್ರಸವ ವೇದನೆಯನ್ನು ನಿವಾರಿಸಲು ವೇದನ ಪ್ರತಿಬಂಧಿ (anaesthetics) ಯನ್ನು ಉಪಯೋಗಿಸಿದಾಗ ಸ್ತ್ರೀಯು ಪ್ರಸವವೇದನೆಯನ್ನು ಅನುಭವಿಸುವುದು ದೈವನಿಯಾಮಕವೆಂದೂ ಹಾಗಿಲ್ಲದಿದ್ದರೆ ದೇವರೇ ಅದನ್ನೂ ನೊವಿಲ್ಲದಂತೆ ಮಾಡುತಿದ್ದನೆಂದೂ ವಾದಿಸಿದರು. ಸ್ತ್ರೀಯ ಪ್ರಸವವೇದನೆಯನ್ನು ಕಡಿಮೆಮಾಡುವುದು ದೇವರಸಂಕಲ್ಪವನ್ನೇ ಭಂಗಗೊಳಿಸಿದಂತಾಗಿ ಅದು ಅಧರ್ಮವಾದೀತು ಎಂದರು.

ಕೇವಲ ಕಷ್ಟ ಅನುಭವಿಸುವುದೇ ದೊಡ್ಡ ಸಾಧನೆ ಎಂಬ ಭಾವ ಹಿಂದು ಮತ್ತು ಗ್ರೀಕರ ವಿಚಾರ ಪರಂಪರೆಗೆ ಹೊಂದುವುದಿಲ್ಲ. ಕ್ರೈಸ್ತ ಧರ್ಮ ಮಾನವನಿಗೂ ಪ್ರಕೃತಿಗೂ ಇರುವ ದ್ವೈತಭಾವವನ್ನು ಉಗ್ರಗೊಳಿಸುತ್ತದೆ. ಆತ್ಮೋದ್ಧಾರವಾಗಬೇಕಾದರೆ ದೇಹದ ದೌರ್ಬಲ್ಯವನ್ನೂ ಅದರ ಕಾಮುಕ ಪ್ರವೃತ್ತಿಯನ್ನೂ ಮೆಟ್ಟಬೇಕೆನ್ನುತ್ತದೆ. ದೇವರಲ್ಲಿ ಭಯಭಕ್ತಿಯೊಡನೆ ಸೇರದ ಎಲ್ಲ ಸುಖಾಭಿಲಾಷೆಯನ್ನೂ ಮಡಿವಂತ ಮತಧರ್ಮ ಖಂಡಿಸುತ್ತದೆ. ಮಾನವನ ವಿದ್ಯೆ, ಕಲೆ, ಕಾವ್ಯ, ಚಿತ್ರಲೇಖನ, ಸಂಗೀತ, ಸಾಹಿತ್ಯ ಇವೆಲ್ಲವನ್ನೂ ಸೈತಾನನ ಮೋಹಜಾಲವೆಂದು ಬಗೆಯುತ್ತದೆ.

ಅಧ್ಯಾತ್ಮಜೀವನವೇ ಬೇರೆ ಸಮಾಜದಲ್ಲಿ ನಾವು ಬಾಳುವ ಸಾಮಾನ್ಯ ಜೀವನವೇ ಬೇರೆ ಎಂಬ ಅನುಕೂಲ ವಾದವನ್ನು ಹೂಡಿ ಕೆಲವರು ಸಂಸಾರದ ತೊಡಕುಗಳಿಂದ ತಪ್ಪಿಸಿಕೊಳ್ಳಲು ಪ್ರಯತ್ನ ಮಾಡುತ್ತಾರೆ. ಆಧ್ಯಾತ್ಮಿಕ ಅಲೌಕಿಕವಾದವೊಂದನ್ನು ಮುಂದಿಟ್ಟು ಇವರು ಜೀವನದಿಂದ ವಿಮುಖರಾಗುತ್ತಾರೆ. ಜೀವನ ಪರಾಂಗ್ಮುಖರಾದ ಈ ಧ್ಯಾನಜೀವನದ ರಸಿಕರು ಕನಸಿನ ಪ್ರಪಂಚದಲ್ಲಿ ಆಸರೆ ಹೊಂದುತ್ತಾರೆ. ಇವರಿಗೆ ಮತ ಧರ್ಮ ಯಾವುದೋ ಪರಲೋಕಕ್ಕೆ ಸಂಬಂಧ ಪಟ್ಟದ್ದು. ಅದು ಹುಡುಕುವ ಹಿತ " ಈ ಲೋಕದ್ದು " ಅಲ್ಲ. ಇಹಲೋಕಭ್ರಷ್ಟರಾದ ಇಂಥ ಜನ ಒಡನೆ ಗಮನಿಸಬೇಕಾದ ಮಾನವೀಯ ಕಾರ್ಯಗಳಿಂದ ಜಾರಿದವರಾಗಿ ಸುರಕ್ಷಿತ ಬಾಳಿನ ಮರೆಹೋಗುತ್ತಾರೆ. ವೈದಿಕ-ಲೌಕಿಕ, ಇಹ-ಪರ ಇವುಗಳನ್ನು ಪ್ರತ್ಯೇಕಿಸಿ ಜಗತ್ತಿನ ದುರಂತಗತಿಯ ವಿಷಯದಲ್ಲಿ ಉದಾಸೀನ ಭಾವವನ್ನು ತಾಳುತ್ತಾರೆ. ಮಾನವಕುಲದ ಸಾಮಾಜಿಕ ದುಃಖಗಳಿಂದ ಹಿಮ್ಮೆಟ್ಟುತ್ತಾರೆ. ನ್ಯಾಯವೆಂಬುದು ಈ ಜಗತ್ತಿನಲ್ಲಿ ಎಲ್ಲೂ ಎಂದೂ ಸಿಗದೆ ಮೃತ್ಯುವಿನ ಆಚೆಗೆ ಸಿಗಬಲ್ಲದೆಂದು ಘೋಷಣೆಮಾಡಿ ಸಾಮಾಜಿಕ ಹಿತದ ಪುನರುದಯ ಮತಧರ್ಮದಿಂದ ಆಗದಂತೆ ಮಾಡುತ್ತಾರೆ.

ಮತಧರ್ಮಕ್ಕೂ ಸಮಾಜ ಜೀವನಕ್ಕೂ ಮಧ್ಯೆ ಪ್ರತ್ಯೇಕಿಸಬಲ್ಲ ಗೆರೆ ಎಳೆಯುವುದು ಕಷ್ಟ. ಸಾಮಾಜಿಕ ವ್ಯವಸ್ಥೆ ಎನ್ನುವುದು ಅನುಯಾಯಿಗಳೊಡನೆ ಹೇಗೆ ಬಾಳಬೇಕು ಅನ್ನುವುದರ ಬಗೆಗೆ ಮನುಷ್ಯರು ಸಂತತವಾಗಿ ಮಾಡಿಕೊಂಡ ಸಂಕಲ್ಪ ಸರಣಿಯ ಪರಿಣಾಮ. ಈ ಸಂಕಲ್ಪಗಳು ಆಧ್ಯಾತ್ಮಿಕ ವಿವೇಕಕ್ಕೆ ಸಂಬಂಧ ಪಟ್ಟವು. ಇವುಗಳನ್ನು ಕಾರ್ಯಗತ ಮಾಡಬೇಕಾದರೆ ವಿಶೇಷ ಪ್ರಾಯೋಗಿಕ ಜ್ಞಾನವೂ, ಸಮಾಜ ಹಿತಚಿಂತನೆಯೂ ಅವಶ್ಯಕ.

ಮತಧರ್ಮ ಸಮಾಜ ಸುಧಾರಣೆಯ ಚಳುವಳಿ ಅಲ್ಲವೆಂಬುದು ನಿಜ. ಆದರೆ ಪ್ರತಿಯೊಬ್ಬನ ಜೀವನದ ಬಹುಭಾಗ ಸಮಾಜದಲ್ಲಿಯೇ ಕಳೆಯಬೇಕಾದಂಥಹುದು. ಸುಭದ್ರವಾದ ಸಮಾಜವ್ಯವಸ್ಥೆಯೇ ನಾಗರಿಕ ಜೀವನದ ತಳಹದಿ. ಮತಧರ್ಮ ಸಮಾಜಸಂಘಟನೆಯ ಸಿಮೆಂಟು. ಇದರ ಮೂಲಕ ಮಾನವರು ತಮ್ಮ ಉತ್ಕಾಂಕ್ಷೆಗಳನ್ನು ಪ್ರಕಟಿಸುತ್ತಾರೆ; ಭಗ್ನ

ಮನೋರಥರಾದಾಗ ಇದರಿಂದ ಸಮಾಧಾನ ಪಡೆಯುತ್ತಾರೆ.

ಮತಧರ್ಮವನ್ನು ಒಂದು ಪಲಾಯನ ಮಾರ್ಗವೆಂದು ಅರ್ಥಮಾಡಿಕೊಳ್ಳದಿದ್ದಾಗ ರೂಢಿ ಪರಂಪರೆಯನ್ನು ಸಮರ್ಥಿಸಲು ಇದನ್ನು ಉಪಯೋಗಿಸುತ್ತೇವೆ. ಮತಧರ್ಮಗಳು ಸಾಧಾರಣವಾಗಿ ಆಯಾಕಾಲದ ವ್ಯವಸ್ಥೆಯನ್ನೇಸಮರ್ಥನೆ ಮಾಡುವ ಪ್ರವೃತ್ತಿಯುಳ್ಳದ್ದಾಗಿವೆ. ಯಾರು ಅಧಿಕಾರ ಪಡೆದಿರುವರೋ ಅವರನ್ನು ಸಾಂತ್ವಗೊಳಿಸಲು ಪ್ರಯತ್ನಿಸುತ್ತವೆ. ತಮ್ಮ ರಕ್ಷಣೆಗೆ ಅವರ ಮೇಲೆ ವಾಲುವುದೂ ಉಂಟು. ಈ ರೂಢಿದಾಸ್ಯ ಮತ್ತು ಅಧಿಕಾರಿಗಳನ್ನು ಸಾಂತ್ವಗೊಳಿಸುವ ಚಾಳಿ ಎಲ್ಲ ಮತಧರ್ಮಗಳಲ್ಲಿಯೂ ಕಾಣುತ್ತೇವೆ. ಇವು ಯಾವೊಂದು ಮತಧರ್ಮದ ವಿಶಿಷ್ಟ ಲಕ್ಷಣವಲ್ಲ. ಇಂದಿಗೂ ಕೆಲವು ಹಿಂದುಗಳಿದ್ದಾರೆ—ಅವರ ಸಂಖ್ಯೆ ಕಡಮೆಯಾಗುತ್ತಿರುವುದು ಒಂದು ಸಮಾಧಾನ—ಅವರು ಭಯಾತುರರಾಗಿ ಅವಮಾನಕರವಾದ ಜಾತಿ ಪದ್ಧತಿಯನ್ನೂ ಅಪರಾಧವಾದ ಅಸ್ಪೃಶ್ಯತೆಯನ್ನೂ ಎತ್ತಿಹಿಡಿಯುತ್ತಿದ್ದಾರೆ. ಕ್ರೈಸ್ತಧರ್ಮವೇನೋ ಗುಲಾಮಗಿರಿಯನ್ನು ತೊಡೆದುಹಾಕುವುದರಲ್ಲಿ ನಿಸ್ಸಂದೇಹವಾಗಿ ಸಹಾಯಕವಾಯಿತು. ಅನೇಕ ರೀತಿಯ ಸಾಮಾಜಿಕ ದೋಷಗಳನ್ನು ನಿವಾರಿಸಲೂ ಕಾರಣವಾಯಿತು. ಆದರೆ ಕ್ರೈಸ್ತ ಸಮಾಜವನ್ನು ಒಟ್ಟಗೆ ತೆಗೆದುಕೊಂಡರೆ ಸುವಾರ್ತೆ (Gospel)ಗೆ ಅನುಸಾರವಾಗಿ ಬಾಳಲು ಅದು ಪ್ರತಿಜ್ಞೆಮಾಡಿಲ್ಲ. ತಮ್ಮ ಕಣ್ಣಿನಲ್ಲೇ ಇರುವ ದೋಷವನ್ನು ಅವರು ನೋಡುವುದಿಲ್ಲ. ಹಾಗೂ ಶಿಲುಬೆಯನ್ನು ಹೊರಲಾಗಲಿ ವಿಷಪಾನ ಮಾಡಲಾಗಲಿ ಅವರಲ್ಲಿ ಯಾರೂ ಸಿದ್ಧರಿಲ್ಲ.

ಮತಧರ್ಮ ಸಂಸ್ಥಾಪಕರು ಮಾನವಕುಲದ ಬಹುಜನರ ಸಂಕಟವನ್ನು ಅವರ ಜೀವನದ ಅನಿವಾರ್ಯ ಭಾಗವೆಂದೋ ಜನ್ಮಾಂತರಗಳಲ್ಲಿ ಮಾಡಿದ ಘೋರ ಪಾತಕಗಳಿಗೆ ಪ್ರಾಯಶ್ಚಿತ್ತವೆಂದೋ ಭಾವಿಸುವರು. ಯಾತನೆಯನ್ನು ಅನುಭವಿಸುತ್ತಿರುವವರ ದುಃಖವನ್ನೂ ಕ್ರೋಧವನ್ನೂ ಶಮನಮಾಡುವ ಸಲುವಾಗಿ ಸಧ್ಯದ ದುಃಖದ ಅಂತ್ಯದಲ್ಲಿ ಸುಖವನ್ನು ಅನುಭವಿಸಬಲ್ಲರೆಂದು ಹೇಳಿ, ಜೀವನದ ಏರುಪೇರನ್ನು ಸರಿಗೊಳಿಸಲು ಅವರ ಮುಂದೆ ಸ್ವರ್ಗಸುಖದ ಚಿತ್ರವನ್ನು ಇಡುತ್ತಾರೆ. ಆದ್ದರಿಂದಲೇ

ಸಾಮಾಜಿಕ ಧ್ಯೇಯವಾದಿಗಳು ಮತಧರ್ಮವನ್ನು ಅಫೀಮಿಗೆಹೋಲಿಸಿ, ಇದರ ಸೇವನೆಯಿಂದ ಜನತೆಯನ್ನು ಸುಪ್ತ ಸ್ಥಿತಿಗೆ ತಂದು ಬಿಡುತ್ತದೆಂದು ಮತಧರ್ಮವನ್ನು ಖಂಡಿಸುತ್ತಾರೆ. ಮತಧರ್ಮದ ಅನುಯಾಯಿಗಳು ಇದು ತಮಗೆ ಗೊತ್ತಿದ್ದೂ ತಮಗೆ ಬೇಡವಾದದ್ದನ್ನು ಇತರರ ಮೇಲೆ ಹೊರಿಸಿ ಅವರನ್ನು ಮರುಳುಗೊಳಿಸಲು ಉದ್ಯುಕ್ತರಾಗುತ್ತಾರೆನ್ನುತ್ತಾರೆ. ಪಟ್ಟಭದ್ರಹಿತಗಳನ್ನು ಪೋಷಿಸಿಕೊಳ್ಳಲು ಮತಧರ್ಮವನ್ನು ಉಳಿಸಿಕೊಳ್ಳುವ ಆಸೆಯುಳ್ಳ ವಂಚಕರ ಪಿತೂರಿ ಇದೆಂದು ಮತಧರ್ಮವನ್ನು ಖಂಡಿಸುವರು.

ದೇವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು. ಸ್ವಯಂ ಸ್ಫೂರ್ತಿಯಿಂದಲೂ ಸ್ಪಷ್ಟವಾದ ಅರಿವಿನಿಂದಲೂ ಈ ಪಾಠವನ್ನು ಅಮೇರಿಕದ ಸಂವಿಧಾನ ಮತ್ತೆಲ್ಲೂ ಇಲ್ಲದಷ್ಟು ಸ್ಪಷ್ಟವಾಗಿ ಅಂಗೀಕರಿಸಿದೆ. ಸ್ವಾತಂತ್ರ್ಯ ಘೋಷಣೆಯ ಸಮಯದಲ್ಲಿ ಜೆಫರ್‌ಸನ್ ಘಂಟೆ ಹೊಡೆದಂತೆ ಹೇಳಿದ ಈ ವಾಕ್ಯಗಳು ನಮಗೆ ವಿದಿತವಾಗಿಯೇ ಇದೆ. "....ಎಲ್ಲ ಮನುಷ್ಯರೂ ಸಮಾನರಾಗಿ ಸೃಷ್ಟಿಸಲ್ಪಟ್ಟಿದ್ದಾರೆ; ಅವರೆಲ್ಲರಿಗೂ ಸೃಷ್ಟಿಕರ್ತನು ಅವರಿಂದ ಯಾರೂ ಕಸಿದುಕೊಳ್ಳಲಾರದ ಕೆಲವು ಹಕ್ಕುಗಳನ್ನು ಕೊಟ್ಟಿದ್ದಾನೆ. ಅವುಗಳಲ್ಲಿ ಸೇರಿರುವವು ಪ್ರಾಣದ ಮೇಲಿನ ಹಕ್ಕು, ಸ್ವಾತಂತ್ರ್ಯದ ಹಕ್ಕು ಮತ್ತು ಸೌಖ್ಯದ ಅನುಸರಣೆಯ ಹಕ್ಕು." ಈ ಮಾತುಗಳು ಬರಿಯ ಪ್ರಚಾರದ ಮಾತುಗಳಲ್ಲ. ಆಳವಾದ ನಿಷ್ಠೆಯ ಪರಿಣಾಮ. ಜೆಫರ್‌ಸನ್ ಬರೆದ ಕಡೆಯ ಪತ್ರದಲ್ಲಿ ಈ ಘೋಷಣೆಯ ವ್ಯಾಖ್ಯಾನವನ್ನು ಈ ರೀತಿ ಮಾಡಿದನು. "ಬೆನ್ನಿನ ಮೇಲೆ ಜೀನು ಹೊತ್ತು ಜನ ಹುಟ್ಟಿಲ್ಲ; ಕೆಲವರು ಮಾತ್ರ ಪುಣ್ಯವಂತರಾಗಿ ಕುದುರೆಯ ಬೆನ್ನಿನ ಮೇಲೆ ಸವಾರಿ ಮಾಡಲು ಪಾದುಕೆ ಕಂಟಕಗಳನ್ನು ತೊಟ್ಟು ಸೃಷ್ಟಿಸಲ್ಪಟ್ಟಿಲ್ಲ; ದೇವರ ದಯದಿಂದ". ಆದರೂ ಈವತ್ತಿಗೂ ನಾವು ಎಲ್ಲ ಮನುಷ್ಯರನ್ನೂ ಸಮಾನರೆಂದು ವ್ಯವಹರಿಸಲು ಸಿದ್ಧರಾಗಿಲ್ಲ. ನಮ್ಮ ಮಾತಿನಂತೆ ಕೃತಿಯಿಲ್ಲ.

ಬಂಡವಾಳ ಪದ್ಧತಿಯ ಸಮಾಜ ಮಾನವರಲ್ಲಿ ಹಿತಕರವಾದ ಸಂಬಂಧಗಳನ್ನು ಪೋಷಿಸುವುದಿಲ್ಲ. ಉತ್ಪಾದನ ಸಾಧನಗಳೆಲ್ಲವನ್ನೂ ಕೆಲವರು ತಮ್ಮ ಬಳಿ ಉಳಿಸಿಕೊಂಡಿರುವಾಗ ಇತರರು ಗುಲಾಮರಲ್ಲ

ದಿದ್ದರೂ, ತಮ್ಮ ಶ್ರಮವನ್ನು ಅವರು ಹಾಕುವ ಷರತ್ತಿನ ಮೇಲೆ ಅವರಿಗೆ ಮಾರಬೇಕಾಗುತ್ತದೆ. ಮಾನವನ ಆತ್ಮ ಗೌರವಕ್ಕೆ ಕುಂದು ತರುವಂತಹವು ಇವು. ದ್ರವ್ಯಸಂಪಾದನೆಗೆ ಬಂಡವಾಳವಾದಿಗಳು ಕೊಟ್ಟಿರುವ ವಿಪರೀತ ಪ್ರಾಶಸ್ತ್ಯ, ಲಾಭದ ಆಸೆಗೆ ಅದು ನೀಡುವ ಪ್ರಚೋದನೆ, ಅದರ ಅರ್ಥಿಕ ಪುರುಷಾರ್ಥದ ಆರಾಧನೆ—ಇದರ ಮೂಲಕ ಸಾಧಿಸಬೇಕಾದ ಗುರಿಯನ್ನು ವ್ಯಕ್ತಿಗತ ಸ್ವತ್ತಿಗೆ ಇದು ಕೊಟ್ಟಿರುವ ಬೆಂಬಲ; ಆರ್ಥಿಕ ವ್ಯವಸ್ಥೆಗಳ ಪ್ರಯೋಜನಕ್ಕಾಗಿ ಮಾನವರನ್ನು ಕಡೆಗಾಣಿಸುವುದು; ಸಹಿಸಲಸಾಧ್ಯವಾದ ರೀತಿಯಲ್ಲಿ ಮಾನವ ಶೋಷಣೆ, ಉತ್ಪನ್ನಕ್ಕಿಂತಲೂ ಲಾಭದಕಡೆ ಹೆಚ್ಚು ಗಮನ; ಮಾನವ ವರ್ಗದಲ್ಲಿ ತಾರತಮ್ಯದ ಅಂಗೀಕಾರ; ಸಾಮಾಜಿಕ ಪ್ರಯೋಜನದ ಮೇಲೆ ಆಧಾರ ಪಡದೆ ಅವರ ಸಂಪಾದನೆ ಮತ್ತು ಆರ್ಥಿಕ ಸ್ಥಿತಿಗಳ ಮೇಲೆ ವ್ಯಕ್ತಿಗಳ ಗುಣ ನಿಂತಿರುವುದು; ಈ ಭಾವನೆಗಳನ್ನೂ ರೂಢಿಗಳನ್ನೂ ಎಂದಿನವರೆಗೆ ಬಂಡವಾಳಸಮಾಜ ಪ್ರೋತ್ಸಾಹಿಸುತ್ತಾ ಬರುವುದೋ ಅಲ್ಲಿನವರೆಗೆ ಅದು ಸಮಾಜದ ಅಶಾಂತಿಗೆ ದ್ಯೋತಕ ವಾಗಿಯೇ ಇರುತ್ತದೆ.

ಅಧಿಕಾರ ಅವಕಾಶಗಳ ಇಂದಿನ ಹಂಚಿಕೆಯಲ್ಲಿ, ಅದರಲ್ಲೂ ಪೂರ್ವ ದೇಶಗಳಲ್ಲಿ, ಕೇವಲ ಕೆಲವು ಜನ ದುಡಿಯದೆಯೇ ಬಾಳನ್ನು ಸಾಗಿಸು ವಂತಾಗಿದೆ. ಆದರೆ ಬೆನ್ನುಮುರಿಯುವಷ್ಟು ದುಡಿಮೆಯ ಹೊರೆ ಹೊರ ಬೇಕಾದ ಅಗಾಧ ಬಹುಸಂಖ್ಯಾತರು ಉದ್ಧಾರಕ್ಕಾಗಿ ಮೊರೆಯಿಡುತ್ತ ಲಿದ್ದಾರೆ. ಬಡಜನರ ಹೊಲಸುಕೇರಿಗಳು, ನಿರುದ್ಯೋಗ ಮುಂತಾದ ಸಾಮಾಜಿಕ ಸಮಸ್ಯೆಗಳ ಬಗ್ಗೆ ಮತಧರ್ಮಉಪದೇಶಕರ ಮೌನ ಹಾಗೂ ಅನಿಶ್ಚಿತ ಮನೋಧರ್ಮ, ಹಸಿವಿನಿಂದ ಬಳಲಿದ ಮತ್ತು ಕೃತಕ ಭೇದ ಗಳಿಂದ ಕಂಗೆಟ್ಟ ಸಾಮಾನ್ಯ ಜನರ ವಿಷಯದಲ್ಲಿ ಅವರ ತಾತ್ಸಾರ, ಇವು ಮತಧರ್ಮದ ಗೌರವವನ್ನು ಬಹುಮಟ್ಟಿಗೆ ಕುಂದುವಂತೆ ಮಾಡಿದೆ.

ಏಸು ನಮ್ಮ ಶತ್ರುಗಳನ್ನು ಪ್ರೀತಿಸುವಂತೆ ಹೇಳುತ್ತಾನೆ. ನಾವು ಅವರಿಗೆ ಕೆಡಕು ಮಾಡಬಹುದೆಂಬ ಭಯವನ್ನು ಶತ್ರುಗಳ ಮನಸ್ಸಿನಿಂದ ತೊಡೆಯುವ ಪ್ರಯತ್ನವನ್ನು ನಾವೇ ಪೂರ್ವಭಾವಿಯಾಗಿ ಮಾಡಬೇ ಕೆಂಬುದು ಏಸುವಿನ ಆದೇಶ. ಹೀಗೆ ನಮ್ಮನ್ನು ದ್ವೇಷಿಸುವವರಿಗೂ ಒಳ್ಳೆಯ

ದನ್ನು ಮಾಡಬೇಕೆಂಬ ಆದೇಶವನ್ನು ಅದೆಷ್ಟು ಜನ ತಮ್ಮ ಅನುಷ್ಠಾನದಲ್ಲಿ ತಂದುಕೊಂಡಿದ್ದಾರೆ?

ಚರಿತ್ರಾರ್ಹವಾದ ಮತಧರ್ಮಗಳೇ ಯುಗಾಂತರಗಳಿಂದ ಕಲೆ, ಸಂಸ್ಕೃತಿ ಮತ್ತು ಅಧ್ಯಾತ್ಮ ಜೀವನಗಳ ಪೋಷಣೆಗೆ ಎಷ್ಟು ಸಹಾಯ ಮಾಡಿದ್ದರೂ, ಅವುಗಳು ಸ್ವಮತಾಭಿಮಾನ, ಧರ್ಮೋನ್ಮಾದಗಳು, ಕ್ರೌರ್ಯ, ಅಸಹನೆ, ಅನುಯಾಯಿಗಳ ಅಪ್ರಾಮಾಣಿಕತೆ ಅಥವಾ ಕಾಪಟ್ಯಗಳಿಂದ ಕಲುಷಿತವಾಗಿವೆ. ಮತಧರ್ಮಗಳು ಐಹಿಕ ದುರಾಸಕ್ತಿಗಳಿಗೆ ಹೊಂದಿಕೊಳ್ಳುವ ಪ್ರಯತ್ನ ಮಾಡುತ್ತಿರುವವರೆಗೆ ದುಷ್ಟವಾದ ರೂಢಿ ಸಂಪ್ರದಾಯಗಳಿಗೆ ಬೆಂಬಲ ಕೊಡುತ್ತಿರುವವರೆಗೆ, ಮತಧರ್ಮಗಳ ವಿರೋಧವಾಗಿ ದಂಗೆ ಏಳುವವರೇ ನಿಜವಾದ ಮತನಿಷ್ಠರು. ರಷ್ಯದ ಬಕುನಿನ್ ತನ್ನ 'ದೇವರು ಮತ್ತು ಪ್ರಭುತ್ವ' (God and the State) ಅನ್ನುವ ಗ್ರಂಥದಲ್ಲಿ ರಾಜ್ಯಪ್ರಭುತ್ವಕ್ಕೆ ಆಸ್ತಿಕವಾದ ಪ್ರಧಾನ ಬೆಂಬಲವಾಗಿದೆ ಎಂದೂ, ಇದರಿಂದ ವಿವೇಕ, ನ್ಯಾಯ, ಸ್ವಾತಂತ್ರ್ಯಗಳಿಗೆ ಬಹಿಷ್ಕಾರವಾಗುವುದು ಎಂದೂ ಅಭಿಪ್ರಾಯ ಪಡುತ್ತಾನೆ. ಇದರ ಪರಿಹಾರಕ್ಕೆ ಒಂದು ಸಾಮಾಜಿಕ ಕ್ರಾಂತಿಯೇ ಸಂಭವಿಸಬೇಕು. ನಮಗೆ ಏಕಕಾಲದಲ್ಲಿ ಹೆಂಡದ ಅಂಗಡಿಗಳನ್ನೂ ಚರ್ಚುಗಳನ್ನೂ ಮುಚ್ಚುವ ಶಕ್ತಿ ಕೈಗೂಡಬೇಕು ಎನ್ನುತ್ತಾನೆ.

### ೬. ಮತಧರ್ಮ ಮತ್ತು ಪ್ರಪಂಚದ ಐಕಮತ್ಯ

ಕೇವಲ ಆರ್ಥಿಕ ಮತ್ತು ರಾಜಕೀಯ ಸಂಬಂಧಗಳ ಮೂಲಕವೇ ರಾಷ್ಟ್ರಗಳ ಸಮಾಜವನ್ನು ಕಟ್ಟಲಾರೆವು. ಈ ಹೊಸ ಸಮಾಜಕ್ಕೆ ಒಂದು ಭಾವಾನುಬಂಧವನ್ನೂ, ಆಧ್ಯಾತ್ಮಿಕ ಸಂಶ್ಲೇಷವನ್ನೂ ನೀಡಬೇಕಾಗಿದೆ. ವಿಶ್ವಕುಟುಂಬದ ಧಾರಣೆಗೆ ನಾವೆಲ್ಲರೂ ಒಂದು ಅನ್ನುವ ಅದ್ವೈತಭಾವ ಅವಶ್ಯಕ; ಹಾಗೇ ಅಧ್ಯಾತ್ಮ ದೃಷ್ಟಿಯೂ ಮಹತ್ವಾಕಾಂಕ್ಷೆಯೂ ಅವಶ್ಯಕ. ದುರದೃಷ್ಟದಿಂದ ಮತಧರ್ಮಗಳು ಜನರಲ್ಲಿ ಭೇದಭಾವವನ್ನೇ ಹುಟ್ಟಿಸುವ ಹಾಗಾಗಿವೆ. ಮಾನವಕುಲ ಅನೇಕ ಸಣ್ಣ ಸಣ್ಣ ಗುಂಪುಗಳಾಗಿ ಒಡೆದಿರುವುದು ಮಾತ್ರವಲ್ಲದೆ, ಒಂದೊಂದು ಗುಂಪೂ ಪ್ರತ್ಯೇಕವಾದ ಮತಧರ್ಮ ಸಂಪ್ರದಾಯ ಹೊಂದಿದೆ.

'ರಿಲಿಜನ್' ಅನ್ನುವ ಮಾತಿನ ಬೀಜಾರ್ಥದಲ್ಲಿ ಸಂಯೋಜಗೊಳಿಸು, ಒಂದುಗೂಡಿಸು ಎನ್ನುವ ಸೂಚನೆ ಇದೆ. ಆದರೆ ಅದು ಮುಂದಿಡುವ ತನ್ನ ಪರಮಾಧಿಕಾರ ಪರಿಪೂರ್ಣತೆಗಳ ಹಕ್ಕು, ಅವುಗಳಲ್ಲಿ ಪರಸ್ಪರ ಮೂಡಿರುವ ಮನೋಭಾವಗಳು ಉಪಶಮನಗೊಳಿಸಲಾಗದ ಪರಸ್ಪರ ವೈರಭಾವಕ್ಕೆ ಎಡೆಕೊಟ್ಟಿದೆ.

ಮತಾಂತರಗೊಳಿಸುವುದರಲ್ಲಿ ನಂಬಿಕೆ ಇರುವ ಮತಧರ್ಮಗಳು, ಅಂದರೆ ಬೌದ್ಧ ಧರ್ಮ, ಕ್ರೈಸ್ತ ಧರ್ಮ, ಇಸ್ಲಾಮ್‌ಧರ್ಮಗಳು ತಮ್ಮ ಉಚ್ಚತರ ಶ್ರೇಷ್ಠತೆಯಲ್ಲಿ ನಂಬಿಕೆ ಉಳ್ಳವಾಗಿವೆ. ಆತ್ಯಂತಿಕ ಸತ್ಯ ತಮ್ಮ ವಶದಲ್ಲಿರುವುದೆಂದು ಪ್ರತಿಜ್ಞೆ ಮಾಡುತ್ತವೆ. ಇವುಗಳಲ್ಲಿ ಯಾವೊಂದು ಮತಧರ್ಮವು ಈ ಹಕ್ಕು ತನಗೆ ಸೇರಿದುದೆಂದು ವಾದಿಸಿದರೆ ಅದನ್ನು ಒಪ್ಪಬೇಕೆಂಬ ಅಗತ್ಯವೇನು? ಇದಕ್ಕೆ ಇದು ತಮ್ಮ ನಂಬಿಕೆ ಅನ್ನುವ ಹೊರತು ಬೇರೊಂದು ಆಧಾರವಿಲ್ಲ.

## ೭. ನಾಸ್ತಿಕತೆಯ ವೃದ್ಧಿ

ಲಕ್ಷಾಂತರ ಜನರು ಒಂದು ನಂಬಿಕೆ ಬೇಕೆಂದು ಇಚ್ಛೆ ಪಡುತ್ತಾರೆ, ಆದರೆ ಅದು ಅವರಿಗೆ ಶಕ್ಯವಿಲ್ಲದಿದೆ. ಈ ಅನಾಥರು ಮತಧರ್ಮಗಳ ಬಾಹ್ಯಕ್ರಿಯೆಗಳಿಗೆ ಅಂಟಿಕೊಂಡಿರುತ್ತಾರೆ. ನಮ್ಮ ಜಾತಕರ್ಮ, ನಾಮಕರಣ, ದೀಕ್ಷಾಸ್ನಾನ ಅಥವಾ ಉಪನಯನ, ವಿವಾಹ, ಅಂತ್ಯಸಂಸ್ಕಾರ ಇವೆಲ್ಲವೂ ನಮ್ಮ ಮತಸಂಪ್ರದಾಯದಂತೆ ನಡೆಯುತ್ತವೆ. ಆದರೆ ನಮಗೆ ಮಾತ್ರ ಇವುಗಳಲ್ಲಿ ನಂಬಿಕೆಯಿಲ್ಲದೆ ವಿಚಾರಶೂನ್ಯರಾಗಿ ಕಾಪಟ್ಯ ಜೀವನಕ್ಕೆ ತುತ್ತಾಗಿದ್ದೇವೆ. ನಾವಿರುವುದು ನಮ್ಮನ್ನು ಸ್ತಂಭೀಗೊಳಿಸುವ, ನಮ್ಮ ಭ್ರಮೆಗಳನ್ನು ಚದರಿಸುವ ಕಾಲದಲ್ಲಿ. ನಮ್ಮ ಮೌಲ್ಯಗಳು ರೂಪುಗೆಟ್ಟಿವೆ, ನಮ್ಮ ವಿಚಾರ ಅಸ್ಪಷ್ಟವಾಗಿದೆ, ನಮ್ಮ ಗುರಿಗಳು ಡೋಲಾಯಮಾನವಾಗುತ್ತಿವೆ. ನಮ್ಮ ನಾಗರಿಕತೆಯ ಪ್ರಾಣಮೂಲವಾದ ಮರ್ಮ ಅಧ್ಯಾತ್ಮ. ಇದನ್ನು ಬುದ್ಧಿಯು ಪೋಷಿಸಿ ವೃದ್ಧಿಗೊಳಿಸಬಲ್ಲದು. ಆದರೆ ಇದನ್ನು ಸೃಷ್ಟಿಸಲೂ, ಜೀವಂತವನ್ನಾಗಿ ಇಡಲೂ ಅದಕ್ಕೆ ಶಕ್ತಿಯಿಲ್ಲ. ಈ ಅಧ್ಯಾತ್ಮದಿಂದ ನಾವು ಮೂಲೋತ್ಪಾಟಿತರಾಗಿದ್ದೇವೆ. ಬೇರು ನಾಶವಾದರೆ ಒಂದು ಗಿಡ ಸ್ವಲ್ಪಕಾಲ ಉಳಿದಿರಬಹುದು, ಹಸುರಾಗಿಯೂ ಕಾಣ

ಬಹುದು. ಆದರೆ ಇದರ ಆಯಸ್ಸು ಬಹಳ ಪರಿಮಿತ. ಟಿ.ಎಸ್. ಎಲಿಯಟ್ ತನ್ನ "ದಿ ವೇಸ್ಟ್ ಲ್ಯಾಂಡ್" ('ಮರುಭೂಮಿ' ಅಥವಾ 'ಹಾಳುಭೂಮಿ') ಅನ್ನುವ ಪದ್ಯದಲ್ಲಿ ಆಧುನಿಕ ನಾಗರಿಕತೆಯ ನಾರುವ ಪರಿಸ್ಥಿತಿಯನ್ನೂ ಬಾಳಿಗೊಂದು ನಂಬಿಕೆ ಇಲ್ಲದಿರುವುದನ್ನೂ, ಗೊತ್ತುಗುರಿ ಇಲ್ಲದುದನ್ನೂ, ಆಧುನಿಕರ ಚಿದ್ರಂಗದಲ್ಲಿ ಮೂಡಿರುವ ಕಾರ್ಪಣ್ಯ, ಕ್ಷೋಭೆ, ಅರ್ಥರಾಹಿತ್ಯ ವನ್ನೂ ಕುರಿತು ವರ್ಣಿಸುತ್ತಾನೆ. ಈ ಭಾವಶೂನ್ಯ ವಿಚಾರದ ಹವಾಮಾನ ಇಂದಿನ ಪ್ರಪಂಚದಲ್ಲಿ ವಿವಿಧ ಮನೋರೋಗಗಳು ಹೆಚ್ಚಲು ಕಾರಣವಾಗಿದೆ.

ನಮಗೆ ಒಗ್ಗಿದ್ದ ಅನೇಕ ಸಂಬಂಧಗಳೂ, ನಾಗರಿಕತೆಯನ್ನು ಒಗ್ಗಟ್ಟಾಗಿ ಹಿಡಿದಿದ್ದ ತಂತುಗಳೂ ಕಡಿದುಹೋಗುತ್ತಿರುವುದನ್ನು ನಮ್ಮ ಸುತ್ತಲೂ ಕಾಣುತ್ತಿದ್ದೇವೆ.

# ಅಧ್ಯಾಯ ೩

# ನಂಬಿಕೆಯ ಅವಶ್ಯಕತೆ

## ೧. ಮತಧರ್ಮಕ್ಕೆ ಪ್ರತಿಧರ್ಮಗಳು

ಇಂದಿನ ಪ್ರಪಂಚದಲ್ಲಿ ಅನೇಕ ವರ್ಗದ ಜನರು ತಮಗೆ ಇಷ್ಟವಿಲ್ಲದೆ ನಾಸ್ತಿಕ್ಯಕ್ಕೆ ತುತ್ತಾಗಿದ್ದಾರೆ. ಸಂಪ್ರದಾಯದ ಚೌಕಟ್ಟಿನಲ್ಲಿ, ಮಠಗಳ ನಾಲ್ಕುಗೋಡೆಗಳ ಮಧ್ಯೆ ನಿಲ್ಲಲು ಮನಸ್ಸಿಲ್ಲದವರಾಗಿದ್ದಾರೆ. ಆದರೂ ಇವರಿಗೆ ಒಂದು ನಂಬಿಕೆ ಬೇಕು, ಇಂದಿನ ಆವಶ್ಯಕತೆಗಳಿಗೂ ಕಾರ್ಯಗಳಿಗೂ ಸ್ಫೂರ್ತಿ ನೀಡುವ ಒಂದು ಭರವಸೆಯ ಆಧಾರ ಬೇಕು. ಮನುಷ್ಯನು ಸಮಸ್ಥಿತಿಯನ್ನು ಕಳೆದುಕೊಂಡು ಶೂನ್ಯತೆಯಲ್ಲಿ ಬಹಳಕಾಲ ಬಾಳಲಾರ. ತತ್ವಜಿಜ್ಞಾಸೆ ವಿನಾಶಗೊಳಿಸಲಾಗದ ಸಹಜ ಪ್ರವೃತ್ತಿಯೆಂದು ಕ್ಯಾಂಟ್ ಹೇಳುತ್ತಾನೆ. ಇದು ಎಷ್ಟರಮಟ್ಟಿಗೆ ಯಶಸ್ವಿಯಾದ ಸಾಧನವೆಂಬ ವಿಷಯ ಬೇರೆ. ತತ್ವಜಿಜ್ಞಾಸೆಯ ವಿಷಯದಲ್ಲಿ ಕ್ಯಾಂಟ್ ಹೇಳಿದ ಈ ಮಾತು ಮತಧರ್ಮಕ್ಕೂ ಅನ್ವಯಿಸುತ್ತದೆ. ಈ ಸಹಜ ಪ್ರವೃತ್ತಿಗೆ ಸ್ವಲ್ಪಕಾಲ ನೆಲೆ ಇಲ್ಲದಿರಬಹುದು ಆದರೆ ಇದನ್ನು ನಾಶ ಮಾಡಲು ಸಾಧ್ಯವಿಲ್ಲ. ಬಾಳಿಗೊಂದು ನಂಬಿಕೆ ಇಲ್ಲದೆ ಬಾಳು ಅಸಾಧ್ಯ. ಪ್ರಕೃತಿಯು ಶೂನ್ಯತೆಯನ್ನು ಸಹಿಸುವುದಿಲ್ಲ. ಹಾಗೆಯೇ ಮಾನವನ ಚೇತನವೂ ಶೂನ್ಯತೆಗೆ ಅಂಜುತ್ತದೆ. ನಾವು ಕಳೆದುಕೊಂಡಿರುವ ಭರವಸೆಯನ್ನು ಮತ್ತೆ ಸಂಪಾದನೆ ಮಾಡಿಕೊಳ್ಳಬೇಕು. ಅದಕ್ಕೆ ಏನು ಬೆಲೆ ಬೇಕಾದರೂ ಕೊಡಲು ಕೊನೆಗೆ ಬುದ್ಧಿ ನಿಷ್ಠೆಯನ್ನೂ ಬಿಟ್ಟುಕೊಡಲು ಸಿದ್ಧರಾಗುತ್ತೇವೆ. ಹದಿನೇಳನೆಯ ಶತಮಾನದ ಅಂತ್ಯದಿಂದ ಮೊದಲುಗೊಂಡು ಸಾಂಪ್ರದಾಯಿಕ ಮತಧರ್ಮಗಳು ತಮ್ಮ ನೆಲೆಯನ್ನು ಕಳೆದುಕೊಳ್ಳುತ್ತಾ ಬರುತ್ತಿವೆ. ಅವುಗಳ ಸ್ಥಳವನ್ನು ಒಂದಲ್ಲ ಒಂದು ರೀತಿಯ ಮಾನವ ಪೂಜೆ ಆಕ್ರಮಿಸುತ್ತಿದೆ. ವ್ಯಕ್ತಿಯನ್ನು ಮತಧರ್ಮದ ಆಧಾರ ಬಿಟ್ಟು ಕೇವಲ ಐಹಿಕ ಅಥವಾ ಲೌಕಿಕ ಆಧಾರದ ಮೇಲೆ ನಿಲ್ಲಿಸುವ ಪ್ರಯತ್ನಗಳು ಲೋಕಪ್ರಿಯವಾಗುತ್ತಿವೆ.

## ೨. ಮೃಗದೆಶೆಗೆ ಮರುಕಳಿಸುವುದು

ಕೆಲವು ಸಂದರ್ಭಗಳಲ್ಲಿ ಮೃಗದೆಸೆಗೆ ಮರುಕಳಿಸುತ್ತೇವೆ. ಅವಿಚಾರದ ಮಟ್ಟಕ್ಕೆ ಇಳಿಯುತ್ತೇವೆ. ಯುಕ್ತಾಯುಕ್ತ ಪರಿಜ್ಞಾನವನ್ನು ಕಳೆದುಕೊಳ್ಳುತ್ತೇವೆ. ಮನುಷ್ಯರಲ್ಲಿ ಪಶು ಸ್ವಭಾವವನ್ನು ಸಂಪೂರ್ಣವಾಗಿ ಮರುಕೊಳಿಸಲಾಗುವುದಿಲ್ಲ. ಹಸಿಹಸಿಯಾದ ಪ್ರಕೃತಿ ಸ್ಥಿತಿಗೆ ಇಳಿಯಲು ಎಷ್ಟೇ ಪ್ರಯತ್ನ ಪಟ್ಟರೂ ಸಹ ಆತ್ಮಜ್ಞಾನದ ಛಾಯೆಯಿಂದ ತಪ್ಪಿಸಿಕೊಳ್ಳಲಾರೆವು. ನಮ್ಮ ಕ್ಷೋಭೆಗೆ ಮದ್ದು ಸುಪ್ತಚಿತ್ತದ ಗರ್ಭಕ್ಕೆ ಮತ್ತೆ ಜಾರುವುದಲ್ಲ, ಪ್ರಬುದ್ಧ ಚಿತ್ತದ ಕಡೆಗೆ ಏರುವುದು.

## ೩. ಅಸದ್ಧರ್ಮಾವಲಂಬನ

(Paganism)

ಬೌದ್ಧಿಕ, ಕಲಾತ್ಮಕ, ನೈತಿಕ ಮೌಲ್ಯಗಳು ಕುಸಿದು ಬೀಳುತ್ತಿರುವ ಪ್ರಪಂಚದಲ್ಲಿ ವಿಷಯಸುಖಗಳೊಂದೇ ನಿಜವಾದಂಥವು. ಸಂತತ ಪರಿವರ್ತನಗೊಳ್ಳುತ್ತಿರುವ, ಈ ಕ್ಷಣಿಕವಾಗಿರುವ ಪ್ರಪಂಚ ಮಾತ್ರ ನಿಜವೆಂದು ನಾವು ಭಾವಿಸುವುದಾದರೆ, ಈ ಶಬ್ದ ಸ್ಪರ್ಶ ರೂಪ ರಸ ಗಂಧಗಳಿಗೆ ಗೋಚರವಾಗುವ ಈ ಪ್ರಪಂಚ ಒಂದರಿಂದಲೇ ತೃಪ್ತರಾಗಿರಲು ಅಭ್ಯಾಸ ಮಾಡಬೇಕು. ನಾವು ಅಸ್ಥಿರವಾದ ನೆರಳಿನಂತಿರುವ ನಶ್ವರ ಜಂತುಗಳು. ಸಾವು ಎಂದೋ ಒಂದು ದಿನ ನಮ್ಮನ್ನು ಪನಡಿಸುವುದು ಖಂಡಿತ. ನೋವು, ರೋಗ, ದುಃಖಗಳು ನಮ್ಮ ಬಾಳನ್ನು ತುಂಬಿವೆ. ಜೀವನಕ್ಕೂ ಅರ್ಥವಿಲ್ಲ, ಸಾವಿಗೂ ಗೌರವವಿಲ್ಲ. ಅಪಜಯ ಅಮುಖ್ಯ; ಜಯಕ್ಕೂ ಅರ್ಥವಿಲ್ಲ. ಆದರೂ ದುಃಖ ಅನುಭವಿಸುದಕ್ಕಾಗಿ ನಾವು ಹುಟ್ಟಿಲ್ಲ. ಪ್ರಪಂಚವನ್ನು ದೂಷಿಸುತ್ತಾ ಜೀವನವೆಂಬ ವರಪ್ರಸಾದವನ್ನು ವ್ಯರ್ಥಗೊಳಿಸಲೂ ಹುಟ್ಟಿಲ್ಲ. ದೇವರನ್ನು ಶಪಿಸುವದಕ್ಕೂ ಅಲ್ಲ. ದೇಹನಿಷ್ಠರು ಹಾಯಾಗಿ ಮಲಗಿ ಎನ್ನುತ್ತಾರೆ. "ಮನೆಯಲ್ಲಿ ಬೆಚ್ಚಗೆ ಬೆಂಕಿಯ ಮುಂದೆ ಕುಳಿತು ಪೈಗಳ ಮೈಯನ್ನು ಕೊಬ್ಬಿಸಿರಿ" ಎಂದು ಈ ಮನೋಭಾವವನ್ನು ಕುರಿತು ಡಬ್ಲ್ಯು. ಬಿ. ಈಟ್ಸ್ ತಮ್ಮ 'ದಿ ಕೆಲ್ಟಿಕ್ ಥಾಟ್' ನಲ್ಲಿ ಬರೆದಿರುತ್ತಾರೆ. ಹೀಗಿಲ್ಲದಿದ್ದರೆ ನಾವು ಮಾಡುವುದು ಇಷ್ಟೇ, ವಿರಾಮವಿಲ್ಲದ ಅರ್ಥವಿಲ್ಲದ, ಏಕೆ ಇದನ್ನು ಮಾಡುತ್ತೆವೆಂದೂ ಅರಿಯದ ಕೆಲಸ.

ಪ್ರಾಚೀನ ಭಾರತದ ಚಾರ್ವಾಕ ದಾರ್ಶನಿಕರೂ ಸಹ ಈ ರೀತಿಯ ವಿಷಯ ಸುಖವೇ ಮುಖ್ಯ ಪುರುಷಾರ್ಥವೆಂಬ ವಾದ ಹೂಡಿದರು:-

ಯಾವಜ್ಜೀವೇತ್ ಸುಖಂ ಜೀವೇತ್
ಋಣಂಕೃತ್ವಾ ಘೃತಂ ಪಿಬೇತ್
ಭಸ್ಮೀಭೂತಸ್ಯ ದೇಹಸ್ಯ
ಪುನರಾಗಮನಮ್ ಕುತಃ.

ಜೀವನ ನಿಮ್ಮದಾದಾಗ, ಸುಖದಿಂದ ಬಾಳಿ: ಸಾವಿನ ಸೂಕ್ಷ್ಮ ದೃಷ್ಟಿಯನ್ನು ಯಾರೂ ತಪ್ಪಿಸಿಕೊಳ್ಳಲಾರರು; ಈ ದೇಹ ಭಸ್ಮೀಭೂತವಾದ ಮೇಲೆ ಮತ್ತೆ ಎಲ್ಲಿಂದ ಇದು ಬರುವುದು?

ಅಸದ್ಧರ್ಮ (Paganism) ಜೀವನದಲ್ಲಿ ಭರವಸೆ ತಪ್ಪಿದ ಗುರುತಾಗಿದೆ. ದೇಹದ ಕರೆಗೆ ಓಗೊಡಬೇಕೋ ಆತ್ಮದ ಕರೆಗೆ ಓಗೊಡಬೇಕೋ ಎಂಬುದನ್ನು ತಿಳಿಯದೆ ಮಾನವ ತಟಸ್ಥನಾಗಿದ್ದಾನೆ. ದೇಹದ ಕರೆಯೇನೋ ಸ್ಪಷ್ಟ, ಸರಳ ಮತ್ತು ಸಹಜ. ಇದಕ್ಕೆ ಕಿವಿಗೊಟ್ಟರೆ ಮನುಷ್ಯನ ವೃದ್ಧಿ ಕುಂಠಿತವಾಗುತ್ತದೆ. ಕ್ರಮೇಣ ಅದರಿಂದ ಬಿಡುಗಡೆ ಹೊಂದಬೇಕೆಂದು ಪ್ರಯತ್ನಿಸುತ್ತಿರುವ ದಾಸ್ಯಕ್ಕೇ ಮತ್ತೆ ಜಾರುತ್ತಾನೆ. ಅವನು ಪಶುಪ್ರವೃತ್ತಿಗಳಿಗೆ ಒಳಗಾಗಿ ತನ್ನ ವಿಕಾಸಮಾರ್ಗದಿಂದ ಹಿಮ್ಮೆಟ್ಟುತ್ತಾನೆ. ಜೀವನದಲ್ಲಿ ಗಾಢವಾದ ಪ್ರಶಾಂತತೆಯ ಚಿಲುಮೆ ಇಲ್ಲದಾಗ ವಿಷಯಾರ್ಥಗಳ ಸುಳಿಯಲ್ಲಿ ಧುಮುಕುತ್ತೇವೆ, ಇದರಿಂದ ತೃಪ್ತಿಗೊಳ್ಳಲು ಪ್ರಯತ್ನಿಸುತ್ತೇವೆ.

ಈ ವ್ಯಗ್ರತೆಗಳಿಂದ ನಮ್ಮಲ್ಲಿಯ ವೇದನೆ ಶೂನ್ಯತೆಗಳ ಕಡೆಗೆ ನಾವು ಗಮನ ಕೊಡದಂತಾಗುವುದು. ಈ ಭ್ರಾಮಕ ಜಗತ್ತಿನೊಡನೆ ಹೊಂದಿಕೊಳ್ಳುವುದು ಕಷ್ಟವಾಗಬಹುದು ಆದರೆ ಯಾವುದು ಹೇಗಾದರೂ ಇರಲಿ ಅನ್ನುವ ನಂಬಿಕೆಯಿಂದ ಉಂಡು, ಮಲಗಿ, ಅಲೆದು, ಅದರಲ್ಲಿಯೇ ಉಳಿದಿರುವುದು ಮಾನವನ ಮನಸ್ಸಿಗೆ ಅಸಾಧ್ಯ. ಸುಶಿಕ್ಷಿತ ಚಾರ್ವಾಕ ದರ್ಶನವೂ ಸಹ ಜೀವನದ ಸಮಸ್ಯೆಗೆ ಪರಿಹಾರವಲ್ಲ.

### ಮಾನವೀಯತೆ (Humanism)

ಮನುಷ್ಯನ ಮನಸ್ಸು ಯಾವ ಸ್ತಂಭಗಳ ಮೇಲೆ ಇದುವರೆಗೂ

ವಾಲಿದ್ದಿತೋ ಅವು ಶಿಥಿಲವೂ ದುರ್ಬಲವೂ ಆದಾಗ, ಪರಂಪರಾಗತವಾದ ಧರ್ಮಗಳಿಗೆ ಆಧಾರವಿಲ್ಲವೆಂದು ಸಂಶಯ ಅಂಕುರಿಸಿದಾಗ, ಜೀವನಕ್ಕೆ ಏನೂ ಅರ್ಥವಿಲ್ಲವೆಂದು ತೋರಿದಾಗ, ಅದರ ವ್ಯಾಪ್ತಿಸುಕ್ಕಿ ಸೊರಗಿದಾಗ, ನಮಗೆ ಯಾರ ಭರವಸೆಯೂ ಇಲ್ಲದೆ ಭಯ ನಮ್ಮನ್ನು ಕವಿದಾಗ, ತಾನು ಒಬ್ಬಂಟಿಗನೆಂಬ ಭಾವನೆ ಹಠಾತ್ತಾಗಿ ಸಂಘಟಿಸಿದಾಗ, ಬುದ್ಧಿ ಸ್ವಾಸ್ಥ್ಯವನ್ನು ಉಳಿಸಿಕೊಳ್ಳಲು ನಮಗೆ ತೋರುವುದು ಮಾರ್ಗ ಒಂದೇ ; ನಿಶ್ಚಯಾತ್ಮಕವಾದ ಸಾರಭೂತವಾದ ಸರಳವಾದ ಸತ್ಯವನ್ನೂ ಮತ್ತು ಗಂಭೀರವಾದ ಶೀಲವನ್ನೂ ಭದ್ರವಾಗಿ ಹಿಡಿದು ನಿಲ್ಲುವುದು. ನಾವು ಭಯದಿಂದ ತಲ್ಲಣಿಸುವ ಸಮಯಗಳಲ್ಲಿ ಎಲ್ಲವನ್ನೂ ಮುಗಿಸಿಬಿಡುವ ಸಾವು ನಮ್ಮ ಮುಂದೆ ನಿಲ್ಲುತ್ತದೆ. ಜೀವಂತ ವಿಶ್ವವೆಲ್ಲಾ ಹಾಳು ಸುರಿದಂತಾಗುತ್ತದೆ. ತಲೆ ಎತ್ತಿ ನೋಡಿದರೆ ದೇವರು ಬಿಟ್ಟುಹೋದ ಆಕಾಶವನ್ನು ಶೂನ್ಯತೆಯ ಕತ್ತಲು ಆವರಿಸುತ್ತದೆ.

ಮಾನವೀಯತೆಯ ಸಿದ್ಧಾಂತಕ್ಕೆ (Humanism) ಮನುಷ್ಯನೇ ಜೀವನದ ಪರಮಸತ್ಯ. ಮಾನವನ ಸೇವೆಯೇ ಪರಮೋತ್ಕೃಷ್ಟ ಧರ್ಮ. ಇದಕ್ಕೆ ಒಳ್ಳೆಯತನದಲ್ಲಿ, ಯುಕ್ತಾಹಾರ ವಿಹಾರಗಳಲ್ಲಿ, ಸಾಮರಸ್ಯದಲ್ಲಿ, ವಿವೇಚನೆಯಲ್ಲಿ, ನಂಬಿಕೆ ಇದೆ. ಆದರೆ ಮತಧರ್ಮದಲ್ಲಿ ಇದರಲ್ಲಿಲ್ಲದ ಇನ್ನೊಂದು ಆದರ್ಶವಿದೆ. ಮಾನವ ಸ್ವಭಾವಸಿದ್ಧವಾಗಿ ಒಳ್ಳೆಯವನೆಂದೂ ಆದರೆ ಆನುಷಂಗಿಕವಾಗಿ ಆವರಿಸುವ ಬಾಹ್ಯ ಪರಿಸ್ಥಿತಿಗಳ ಸಲುವಾಗಿ ಇವನು ಕೆಡುತ್ತಾನೆಂದೂ, ಇವುಗಳನ್ನು ಸರಿಪಡಿಸಿದರೆ ಮನುಷ್ಯನ ಒಳ್ಳೆಯತನ ಪ್ರಕಾಶಕ್ಕೆ ಬರುವುದೆಂದೂ ಇದರಿಂದ ಪ್ರಗತಿ ಸಾಧ್ಯವಾಗುವುದೆಂದೂ ಮಾನವೀಯತೆಯ ಸಿದ್ಧಾಂತ ಗ್ರಹಿಸುತ್ತದೆ. ಆದರೆ ಮತಧರ್ಮವಾದರೋ ಈ ಮಾನವ ಸ್ವಭಾವನಷ್ಟೇ ಅವನ ಉದ್ಧಾರಕ್ಕೆ ಸಾಕಾಗುವುದಿಲ್ಲವೆಂದು ನಂಬುತ್ತದೆ.

ಇದು ವ್ಯವಹಾರ ಇದು ಪರಮಾರ್ಥ, ಇದು ಐಹಿಕ ಇದು ಪಾರಲೌಕಿಕ, ಇದು ದೈಹಿಕ ಇದು ಅಧ್ಯಾತ್ಮಿಕ ಎಂದು ಒಂದನ್ನು ಮತ್ತೊಂದರಿಂದ ಪ್ರತ್ಯೇಕಿಸುವುದರಲ್ಲಿ ನಿರತವಾದ ಮತಧರ್ಮಕ್ಕೆ ಮಾನವೀಯತೆಯ ದರ್ಶನ ನೇರ ವಿರೋಧ ಪ್ರತಿಭಟನೆ. ಮತಧರ್ಮವು ಇಡೀ ಜೀವನವನ್ನು

ಆವರಿಸಬೇಕು ಇಲ್ಲವಾದರೆ ಅದು ಶೂನ್ಯವಾಗುತ್ತದೆ. ಪ್ರತಿ ಮತಧರ್ಮವೂ ಮಾನವನ ಘನತೆಯಲ್ಲಿ .ಅವನ ವ್ಯಕ್ತಿತ್ವದ ವಿಕಾಸಕ್ಕೆ ಅವಶ್ಯಕವಾದ ಹಕ್ಕುಗಳಲ್ಲಿ ಗೌರವಯುತ ಆದರವನ್ನು ಹೊಂದಿರಬೇಕು. ಮತಧರ್ಮವನ್ನು ಬಿಟ್ಟುಕೊಟ್ಟರೆ ಇವುಗಳನ್ನು ಉಳಿಸಿಕೊಳ್ಳುವುದೂ ಕಷ್ಟ. ಸಾಕ್ರೆಟಸನನ್ನು ಸಂಧಿಸಿದ ಭಾರತದ ಪ್ರಜೆಯೊಬ್ಬ ದೇವರನ್ನು ಅರಿಯದ ನಾವು ಮಾನವನನ್ನು ಅರಿಯೆವು ಎಂದು ಹೇಳಿದನೆಂದು ಪ್ರತೀತಿ ಇದೆ. ಮತಧರ್ಮ ಮಾನವತ್ವದ ಪರಿಪೂರ್ಣ ಆವಿಷ್ಕಾರ. ಮನುಷ್ಯದರ್ಶನ ಇಂದು ಅರಸುತ್ತಿರುವುದು ಅದಕ್ಕೆ ಜೀವಾಳವಾದ ಒಂದು ಅಂತರಾತ್ಮವನ್ನು.

## ೫. ರಾಷ್ಟ್ರೀಯತಾಭಾವನೆ

## (Nationalism)

ಬಣಗಳೊಡನೆ ಕಲಬೆರಿಕೆಯಾದ ಮತಧರ್ಮದ ಒಂದು ವ್ಯಾಪಾರವೇನೆಂದರೆ ಅದಕ್ಕೆ ಸೇರಿದವರಿಗೆ ಕುಲಾಭಿಮಾನವನ್ನೂ ಕುಲಕ್ಕೆ ವಿಧೇಯತೆಯನ್ನೂ ಕಲಿಸಿಕೊಡುವುದು. ಇಸ್ರೇಲಿನ ದೇವತೆಯಾದ ಯಹೂವ ರಾಷ್ಟ್ರೀಯ ಭಾವನೆಯ ಪ್ರತಿನಿಧಿಯಾಗಿದ್ದ. ಯಹೂದ್ಯರು ಒಂದು ಬೃಹತ್ ಕುಟುಂಬಕ್ಕೆ ಸೇರಿದ್ದರು, ಒಂದು ಬಣವಾಗಿದ್ದರು.

ರಾಷ್ಟ್ರೀಯತೆ ಒಂದು ರಾಜಕೀಯ ಮತಧರ್ಮ. ಅದು ಮನುಷ್ಯರ ಅಂತಃಕರಣವನ್ನೂ ಸಂಕಲ್ಪ ಶಕ್ತಿಯನ್ನೂ ಸ್ಫುರಣಗೊಳಿಸುತ್ತದೆ. ಶುದ್ಧವಾದ ಧಾರ್ಮಿಕ ಚಳುವಳಿಗಳಿಗೆ ಇಂದು ಸಾಧ್ಯವಿಲ್ಲದೆ ಇರುವ, ಸೇವೆ ತ್ಯಾಗಗಳಿಗೆ ಅವರನ್ನು ಅನುಗೊಳಿಸುತ್ತದೆ. ಅದರ ವಾಣಿ ಅಧಿಕಾರಯುತವಾದದ್ದು ಮತ್ತು ನಮ್ಮ ರಸಭಾವಕ್ಕೆ ಹಿಡಿಯುವಂತಹದು. ರಾಷ್ಟ್ರಗಳು ತಾವು ಈ ಜಗತ್ತಿನಲ್ಲಿ ಈಶ್ವರ ಸಂಕಲ್ಪದ ಆವಿರ್ಭಾವವೆಂದು ಹೇಳಿಕೊಳ್ಳುತ್ತವೆ.

ಮತಧರ್ಮ ಸ್ವರೂಪತಃ ಉದಾರವೂ, ಕಾಲದೇಶ ಅಬಾಧಿತವೂ, ಎಲ್ಲ ವರ್ಗಗಳ ಎಲ್ಲ ರೀತಿಯ ಮಾನವರಿಗೂ ಅನ್ವಯಿಸುವಂಥದೂ ಆಗಿರಬೇಕು. ರಾಷ್ಟ್ರೀಯ ಪ್ರತಿಷ್ಠೆಗೂ ಇದಕ್ಕೂ ಸರಿಹೊಂದುವುದಿಲ್ಲ. ಮತಧರ್ಮ ಒಂದು ಗುಂಪು, ವರ್ಗ, ರಾಷ್ಟ್ರಗಳ ವ್ಯಾಪಾರವಾಗದ ಹೊರತು ಅದರ ಮಾರ್ಗ ಋಜುವಾದ ಮಾರ್ಗವಾಗುವುದಿಲ್ಲ. ಗುಂಪಿನ, ಅದು

ರಾಷ್ಟ್ರವಾಗಿಯೇ ಇದ್ದರೂ ಸಹ, ಅದರ ವಿಷಯದಲ್ಲಿ ವಿಪರೀತವಾದ ನಿಷ್ಠೆ ತೋರುವುದು, ದೇವರನ್ನೇ ರಾಷ್ಟ್ರೀಯತೆಗೆ ಒಂದು ವಿಶೇಷಣ ಮಾಡಿದಷ್ಟು ಭಗವದಪಚಾರವಾಗುತ್ತದೆ. ಒಂದು ರಾಷ್ಟ್ರ ತನ್ನನ್ನು ದೇವಾಂಶ ಸಂಭೂತವೆಂದೂ, ತಾನೇ ಲೋಕವನ್ನೆಲ್ಲಾ ತನ್ನ ಸತ್ಯದಿಂದ ಉದ್ಧಾರಮಾಡಲು ವಿಧಾತನಿಂದ ವಿಧಾಯಕವಾಗಿರುವುದೆಂದು ನಂಬಿದಾಗ ಪ್ರಾಬಲ್ಯದ ವಾಂಛೆ, ಆಧಿಪತ್ಯದ ದರ್ಪ ಹುಟ್ಟುತ್ತದೆ.

### ೬. ಸಮತಾವಾದ
### (Communism)

ಮಾರ್ಕ್ಸ್ ಪಂಥಿಗಳು ಮನುಷ್ಯನ ಸ್ವಭಾವವನ್ನು ಕುರಿತು ವೈಜ್ಞಾನಿಕ ದೃಷ್ಟಿಯನ್ನು ಬೆಳೆಸಿಕೊಂಡಿರುವವರೆಂದು ನಂಬುತ್ತಾರೆ. ಸಾಮಾಜಿಕ ಪ್ರಾಣಿಯಾದ ಮನುಷ್ಯನ ಸ್ವಭಾವ ಜೀವನಾಧಾರಕ್ಕೆ ಆವಶ್ಯಕವಾದ ವಸ್ತುಗಳ ಉತ್ಪಾದನೆಯ ಕ್ರಮದ ಮೇಲೆ ಆಧಾರ ಪಟ್ಟಿದೆ ಎನ್ನುತ್ತಾರೆ. ಅವನ ಚೇತನವೆಲ್ಲವೂ ಅವನ ಸಾಮಾಜಿಕ ಪರಿಸ್ಥಿತಿಯಿಂದ ಉದ್ಭವವಾದದ್ದು. ಜೀವನದ ಅವಶ್ಯಕತೆಗಳನ್ನು ಪೂರ್ಣಗೊಳಿಸುವ ಆರ್ಥಿಕ ಆಧಾರದ ಮೇಲೆ ಇವನ ಮನಸ್ಸೆಂಬ ಸೌಧ ರಚಿತವಾಗಿದೆ. ನಾವು ಯಾವುದನ್ನು ತತ್ವಜ್ಞಾನ, ದರ್ಶನಗಳು ಎಂದು ಕರೆಯುತ್ತೇವೊ ಅವು ಒಂದು ಪರಿಸ್ಥಿತಿಗೆ ಹೊಂದಿಕೊಂಡು ಉದ್ಭವಿಸಿರುವ, ಕೆಲವು ಪಟ್ಟಭದ್ರ ಹಿತಾರ್ಥಗಳ ಸಮರ್ಥನೆಗಾಗಿ ಏರ್ಪಟ್ಟ, ಕೇವಲ ಭಾವನಾಸಮುಚ್ಚಯಗಳು. ಉತ್ಪತ್ತಿ ಸಾಧನಗಳಲ್ಲಿ ಬದಲಾವಣೆ ಆದ ಹಾಗೆಲ್ಲಾ ವರ್ಗಗಳು ಬದಲಾವಣೆ ಆಗುತ್ತವೆ. ಇಂದಿನ ಬಂಡವಾಳಗಾರರು ಮತ್ತು ಕಾರ್ಮಿಕರು ಅನ್ನುವ ವರ್ಗಭೇದ ಇರುವ ಸಂದರ್ಭದಲ್ಲಿ ಒಂದು ವರ್ಗ ಮತ್ತೊಂದು ವರ್ಗವನ್ನು ತನ್ನ ಅಧೀನದಲ್ಲಿ ಇರಿಸಿಕೊಳ್ಳಲು ಸಹಾಯಮಾಡುವ ಸಾಧನವಾಗುತ್ತದೆ ರಾಜ್ಯ ಸಂಸ್ಥೆ. ಅಧೀನವರ್ಗವು ತೃಪ್ತಿಯಿಂದ ಇರಲು ಅದಕ್ಕೆ ಉಣಿಸುವ ಅಫೀಮು ಮತಧರ್ಮ. ಉತ್ಪತ್ತಿಯ ಸಾಧನೆಗಳು ಇನ್ನೂ ಅಭಿವೃದ್ಧಿ ಆಗುತ್ತಿರುವ ಸಂಧಿಕಾಲದಲ್ಲಿ ವರ್ಗಘರ್ಷಣೆ ಅನಿವಾರ್ಯ. ಈ ಸ್ಥಿತಿ ಮುಗಿದ ಮೇಲೆ ವರ್ಗರಹಿತ ಸಮಾಜ ಹುಟ್ಟುತ್ತದೆ. ಅದರಲ್ಲಿ ಶೋಷಣೆ ಇರುವುದಿಲ್ಲ, ರಾಜ್ಯ ಸಂಸ್ಥೆಯ ಆವಶ್ಯಕತೆಯೂ ಇರು

ವುದಿಲ್ಲ. ಆ ಸಮಾಜದಲ್ಲಿ ಎಲ್ಲರ ಆವಶ್ಯಕತೆಗಳೂ ಪೂರೈಸಲ್ಪಡುತ್ತವೆ, ಪರಿಪೂರ್ಣ ನ್ಯಾಯ ಸಲ್ಲುತ್ತದೆ ಮತ್ತು ಸ್ವಾತಂತ್ರ್ಯಕ್ಕೆ ಸಂಪೂರ್ಣ ಅವಕಾಶವಿರುತ್ತದೆ. ಇಂದಿನ ಐತಿಹಾಸಿಕ ಘಟ್ಟದಲ್ಲಿ ಈ ಗುರಿಯನ್ನು ಮುಟ್ಟಲು ಧಾವಿಸುತ್ತಿದ್ದೇವೆ. ಸಮತಾವಾದ ಪಕ್ಷದವರು ಈ ಗುರಿಯನ್ನು ಮುಟ್ಟಲು ದೃಢಸಂಕಲ್ಪ ಉಳ್ಳವರಾಗಿದ್ದಾರೆ. ಇವರು ಈ ಭವಿಷ್ಯದ ಕಡೆಗೆ ಮುನ್ನುಗ್ಗುತ್ತಿರುವ ಆಕ್ರಮಣದ ಪಡೆ.

ಮತಧರ್ಮ ಅಲೌಕಿಕ ತತ್ವ, ನೆರವೇರದ ಧ್ಯೇಯದ ಅನ್ವೇಷಣೆ. ಅದು ಕಾಣುವ ಸ್ವರ್ಗದ ಕನಸು ಮಾನವನ ಐತಿಹಾಸಿಕ ಕ್ಷೇತ್ರದಲ್ಲಿ ಸಿದ್ಧಿಸಲಾಗದೆಂದು ಸಮತಾವಾದಿಗಳು ಆಕ್ಷೇಪಿಸುತ್ತಾರೆ. ಇಹಲೋಕ ವ್ಯವಹಾರದಲ್ಲಿ ಅದು ಆಸಕ್ತವಾದಾಗ ಶ್ರೀಮಂತರ ಮತ್ತು ಪ್ರಬಲರಾದವರ ವಿಶೇಷ ಸ್ಥಾನಮಾನಗಳನ್ನು ರಕ್ಷಣೆ ಮಾಡುತ್ತದೆ. ಸಮತಾವಾದದ ಆದರ್ಶ ಇಹಲೋಕದ್ದು, ಅದು ನಮಗೆ ನೀಡುವ ಪುರಸ್ಕಾರ ಭೂಮಿಯಮೇಲೆ ನಾವು ಅನುಭವಿಸಬಹುದಾದ ಸುಖ. ಅದು ಸಹನೆ ಶರಣಾಗತಿಗಳನ್ನು ಬೋಧಿಸುವುದಿಲ್ಲ; ಉದ್ಯಮ ಪ್ರಯತ್ನಗಳನ್ನು ಪ್ರಚೋದಿಸುತ್ತದೆ. ಹೊಸ ಸಮಾಜದ ಸೃಷ್ಟಿಗಾಗಿ ಎಲ್ಲ ತ್ಯಾಗಕ್ಕೂ, ಹೋರಾಟ ನೆಡೆಸುವುದಕ್ಕೂ ನಮ್ಮನ್ನು ಕರೆಯುತ್ತದೆ. ಅದರ ನಿರೀಕ್ಷೆಗಳು ಮತ್ತು ಸಿದ್ಧಾಂತಗಳು ಎಷ್ಟೇ ವಿಲಕ್ಷಣ ಅಥವಾ ಕಾಲ್ಪನಿಕವಾಗಿರಲಿ, ದೌರಾತ್ಮ್ಯದಿಂದ ಕೂಡಿರಲಿ, ಅದರ ಅನ್ವೇಷಣೆ 'ಎಲ್ಲವನ್ನೂ ವಿಕ್ರಯಿಸಿ ಬಡವರಿಗೆ ದಾನಮಾಡು' ಅನ್ನುವ ಏಸುವಿನ ನೀತಿಯ ಮೇಲೆ ನಿಂತಿದೆ. ನಾವೆಲ್ಲರೂ ಈ ನೀತಿಯನ್ನು ಮೆಚ್ಚುತ್ತೇವೆ. ಅವರಂತೆ ನಡೆಯಲು ಮಾತ್ರ ಸಿದ್ಧರಿಲ್ಲ. ಅದರ ಹಿಡಿತ ಮಾತ್ರ ವ್ಯಾಪಕವಾದದ್ದು. ಅಸಹನೀಯವಾದ ಸಾಹಸ ರಹಿತವಾದ ಸಪ್ಪೆ ಜೀವನಕ್ಕೆ ಬೇಸತ್ತ ಬುದ್ಧಿವಂತರು ಇದರಿಂದ ಆಕರ್ಷಿತರಾಗುತ್ತಾರೆ. ಎಲ್ಲ ಕಾಲದಲ್ಲೂ ಕಾಸು ಕೂಡಿಸುತ್ತಿರುವುದು ಅಷ್ಟೇನೂ ಸ್ವಾರಸ್ಯವಾದ ಹವ್ಯಾಸವಲ್ಲ. ತಮ್ಮ ನಿರಾನಂದದ, ವೈವಿಧ್ಯವಿಲ್ಲದ, ಕಾರ್ಪಣ್ಯದ, ಪರಿಮಿತವಾದ ಜೀವನದಿಂದ ಪಾರಾಗಬಹುದೆಂದು ಕಾರ್ಮಿಕರಿಗೆ ಇದು ಮನದಟ್ಟು ಮಾಡಿಕೊಡುತ್ತದೆ. ನಂಬಿಕೆ ಕೆಟ್ಟ, ನಮ್ಮ ಕಾಲದ ರೋಗವೇನೆಂದು ಅರಿಯದ, ಆ ರೋಗಪರಿಹಾರಕ್ಕೆ ಚೈತನ್ಯ

ವಿಲ್ಲದ ಜಗತ್ತಿಗೆ ಒಂದು ಮುಕ್ತಿಯ ಉಪಾಯವನ್ನು ಸಾಮ್ಯವಾದ ನೀಡು ತ್ತದೆ. ಅತಿಭಯ, ಅತ್ಯಾಶೆ, ತಿರಸ್ಕಾರ, ನಿರಾಶೆಗಳಿಂದ ನರಳುತ್ತಿರುವವರಿಗೆ ಸಾವಿನಿಂದ ಪ್ರಾಣವನ್ನು ಹೊರಸೆಳೆಯಬಲ್ಲಂತೆ ತೋರುವ ಮಹೋದ್ದೇಶ ವೊಂದರ ಶಕ್ತಿಯನ್ನು ನೀಡುತ್ತದೆ.

ಸಮತಾವಾದ ಪೂರ್ಣವಾಗಿ ಲೌಕಿಕವಾಗಿದ್ದರೂ ಮತ್ತು ಮನುಷ್ಯ ತ್ವಕ್ಕೆ ಮೀರಿದುದು ಯಾವದೂ ಇಲ್ಲವೆಂದು ನಂಬಿದ್ದರೂ ಸಹ ಮತಧರ್ಮದ ಲಕ್ಷಣಗಳನ್ನೂ ಹೊಂದಿದೆ. ಮನುಷ್ಯನ ಮತ್ತು ನಿಸರ್ಗದ ಒಂದು ಸ್ಪಷ್ಟ ತತ್ವಶಾಸ್ತ್ರವನ್ನು ಇದೇ ಆತ್ಯಂತಿಕ ಸತ್ಯವೆಂದು ನಮ್ಮಮುಂದೆ ಇಡುತ್ತದೆ ಒಂದು ರೀತಿಯ ರಾಜಿಕೀಯ ಮತ್ತು ಆರ್ಥಿಕ ಕ್ರಾಂತಿಯನ್ನು ಹೂಡುವುದ ರಿಂದ ಸಾರ್ವಜನಿಕ ಕ್ಷೇಮ ಏರ್ಪಡುತ್ತದೆ. ಇದು ನಿರ್ದುಷ್ಟವಾದ ಮಾರ್ಗ ವೆಂದು ಸ್ಥಾಪಿಸುವುದಲ್ಲದೆ ಒಂದು ಸಂಪ್ರದಾಯ ಬದ್ಧತೆಯನ್ನೂ ಸಹ ನಮ್ಮ ಮೇಲೆ ಹೇರುತ್ತದೆ. ಇದು ವಿಶ್ವದ ವಿವರಣೆಯನ್ನು ಕೊಡುವ ಬರಿಯ ಲೌಕಿಕ ಸಿದ್ಧಾಂತವಲ್ಲ, ನ್ಯಾಯಕ್ಕಾಗಿ ಇದು ಮಾಡುವ ಕರೆಯಲ್ಲಿ ಮತ ಧರ್ಮದ ನಂಬಿಕೆಯಷ್ಟೇ ಆಳವಾದ ದೃಢನಿಶ್ಚಯವಿದೆ. ಆದರ್ಶವನ್ನು ಮುಟ್ಟಲು ಎಷ್ಟು ಬಲಿದಾನ ಮಾಡಿದರೂ ಸಾಲದೆನ್ನುತ್ತದೆ.

ಪ್ರತಿಯೊಂದು ನಿಜವಾದ ಮತಧರ್ಮದಲ್ಲಿಯೂ ಕ್ರಾಂತಿಯ ಸವಾಲಿನ ಧ್ವನಿ ಒಂದಿದೆ. ನಾವೆಲ್ಲರೂ ಒಂದೇ ದೇವರ ಮಕ್ಕಳು ಅನ್ನುವ ಧಾರ್ಮಿಕ ಸಿದ್ಧಾಂತ ಒಂದು ಲೌಕಿಕ ಉಪಸಿದ್ಧಾಂತಕ್ಕೆ ಎಡೆಕೊಡುತ್ತದೆ. ಮಾನವರ ಜೀವನ ತುಂಬು ಜೀವನವಾಗಬೇಕು, ಸ್ವಾತಂತ್ರ್ಯ ಪೂರ್ಣವಾಗಬೇಕು, ಸುಖಮಯವಾಗಬೇಕು ಮತ್ತು ಇವನ್ನು ಸಾಧಿಸಲು ಸಮಾಜ ಬದಲಾ ವಣೆಯಾಗಬೇಕು ಎನ್ನುವುದು. ಫೂವರ್‌ಬ್ಯಾಕ್‌ನ ಪ್ರಸಿದ್ಧವಾದ ಚರಮ ಸಿದ್ಧಾಂತ ಇದು: "ತತ್ವಶಾಸ್ತ್ರಜ್ಞರು ಜಗತ್ತನ್ನು ವಿವಿಧ ರೀತಿಯಲ್ಲಿ ವಿವರಿಸು ತ್ತಾರೆ. ಆದರೆ ಮುಖ್ಯವಾದ ವಿಷಯ ಇದನ್ನು ಬದಲಾವಣೆ ಮಾಡು ವುದು ಹೇಗೆ ಎನ್ನುವುದು." ಕ್ರೈಸ್ತಧರ್ಮವಾಗಲಿ ಲೌಕಿಕ ಮಾನ ವತಾ ವಾದವಾಗಲಿ ಕೊಡುವ ಅರ್ಥವಿವರಣೆಯಿಂದ ಸಮತಾವಾದ ತೃಪ್ತಿ ಹೊಂದುವುದಿಲ್ಲ. ಅದು ಪ್ರಪಂಚದ ಪರಿವರ್ತನೆ ಮಾಡಲು ಪ್ರಯತ್ನಿಸುತ್ತದೆ. ಕ್ರೈಸ್ತರ ದೃಷ್ಟಿಯಿಂದ ಸಮತಾವಾದ ಒಂದು

ಪಾಷಂಡವಾದ (Heresy), ಅದು ಕ್ರೈಸ್ತ ಸಂಪ್ರದಾಯಬದ್ಧತೆಯನ್ನು ವಿರೋಧಿಸುತ್ತದೆ ಆದರೆ ಈ ವಿರೋಧ ಕ್ರೈಸ್ತಧರ್ಮದ ಸತ್ಯಕ್ಕಾಗಲಿ, ತತ್ವಕ್ಕಾಗಲಿ ಅಲ್ಲ. ಸಮತೆಯ ಸಾಮಾಜಿಕ ವ್ಯವಸ್ಥೆ ಮತಧರ್ಮಗಳಲ್ಲಿ ಒಂದು ಸತ್ಸಂಕಲ್ಪವಾಗಿ ಮಾತ್ರ ಉಳಿಯಿತು. ಆದರೆ ಸಮತಾವಾದದಲ್ಲಿ ಇದನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬೇಕೆಂಬ ಶ್ರದ್ಧಾವಂತ ಪ್ರಯತ್ನವಿದೆ. ಮಾರ್ಕ್ಸ್‌ನ 'ಕ್ಯಾಪಿಟಲ್' ಗ್ರಂಥವನ್ನು ಓದಿದವರು ಯಾರೂ ಸಾಮಾಜಿಕ ಅನ್ಯಾಯವನ್ನು ಕುರಿತ ಅವನ ಕೆಂಡದಂಥಾ ಕೋಪವನ್ನೂ ದೀನರು ದಳಿತರು ದರಿದ್ರರು ಇವರ ಸ್ಥಿತಿಯನ್ನು ಉತ್ತಮಪಡಿಸಬೇಕೆಂಬ ಅನುಕಂಪಯುತವಾದ ಅವನ ತತ್ಪರತೆಯನ್ನೂ ಅರಿಯದಿರಲು ಸಾಧ್ಯವಿಲ್ಲ. ಸಮತಾವಾದವು ಧಾರ್ಮಿಕ ಆಚರಣೆಯ ಲೋಪಗಳನ್ನು ಕುರಿತುಮಾಡಿದ ವಿಮರ್ಶಾತ್ಮಕವಾದ ತೀರ್ಪು.

ಮಾರ್ಕ್ಸ್‌ನ ಆದರ್ಶಸಮಾಜ ಸಮಾನಸ್ಕಂಧರ ಸಮಾಜ. ಅದರಲ್ಲಿ ಯಾರೂ ಯಾರಮೇಲೂ ತನ್ನ ಇಚ್ಛೆಯನ್ನು ಬಲಾತ್ಕಾರದಿಂದ ಹೊರಿಸುವಂತಿಲ್ಲ. ಮಧ್ಯಮವರ್ಗದವರ ಪ್ರಜಾಸತ್ತೆಯನ್ನು ಮಾರ್ಕ್ಸ್ ಖಂಡಿಸಿದ. ಏಕೆಂದರೆ ಅಂತಹ ಸಮಾಜದಲ್ಲಿ ಮಾನವನ ಹಕ್ಕುಗಳು ಒಂದು ಅಲ್ಪಸಂಖ್ಯಾತ ಗುಂಪಿನ ಭಾಗ್ಯವಾಗುತ್ತವೆ. ವರ್ಗರಹಿತ ಸಮಾಜದಲ್ಲಿ ಮಾತ್ರ ತನಗೆ ಹಿತವೆಂದು ಕಂಡುಬರುವ ರೀತಿಯಲ್ಲಿ ಪ್ರತಿವ್ಯಕ್ತಿಯೂ ತನ್ನ ಜೀವನವನ್ನು ರೂಪಿಸಿಕೊಳ್ಳಲು ಸ್ವತಂತ್ರನಾಗಿರುತ್ತಾನೆ. ಇಂತಹ ಸಮಾಜ ಸಾಧ್ಯವಾಗಬೇಕಾದರೆ ಇಡೀ ಸಮಾಜದ ಪ್ರಾಕೃತ ಸಂಪತ್ತು ಸಮಾಜಕ್ಕೆ ಜವಾಬ್ದಾರರಾದವರ ಅಧೀನದಲ್ಲಿ ಸಾಮುದಾಯಿಕ ಹಿತಕ್ಕೆ ಬಳಸಿಕೊಳ್ಳುವಂತಿರಬೇಕು.

ಸಮತಾವಾದದ ಸಾಮಾಜಿಕ ದರ್ಶನಕ್ಕೂ ಸಮತಾವಾದಿ ರಾಷ್ಟ್ರಗಳು ಇದನ್ನು ಕಾರ್ಯಗತಮಾಡಲು ಅವಲಂಬಿಸಿರುವ ಸರಕಾರದ ತಂತ್ರಕ್ಕೂ ಇರುವ ವ್ಯತ್ಯಾಸವನ್ನು ನಾವು ಕಾಣಬೇಕು. ರಾಜಕೀಯ ಅನುಷ್ಠಾನಕ್ಕೆ ಸ್ಫೂರ್ತಿಕೊಡುವ ಯಾವ ರಾಜಕೀಯ ಸಿದ್ಧಾಂತವೂ ಪರಿವರ್ತನೆಯಾಗದೆ ಹಾಗೆಯೇ ಉಳಿಯುವುದಿಲ್ಲ.

ಶಾಸ್ತ್ರದ ವಾಕ್ಯಗಳನ್ನು ಸದಾ ಉದ್ಧರಿಸುವ ಮತಧರ್ಮದ ದುರಭಿಮಾ

ನಿಗಳಂತೆಯೇ ಆಗುತ್ತಿದ್ದಾರೆ ಸಮತಾವಾದಿಗಳು. ತೆರೆದ ಮನಸ್ಸುಳ್ಳವರಾದಾಗ, ಸಮಾಜಗಳ ಸಾಂಸ್ಕೃತಿಕ ಮತ್ತು ಆರ್ಥಿಕ ರಚನೆಗಳು ಉತ್ಪನ್ನಶಕ್ತಿಗಳಿಂದಲೇ ವಿಲಕ್ಷಣವಾದ ರೀತಿಯಲ್ಲಿ ರೂಪುಗೊಂಡಿವೆ ; ಯುದ್ಧಗಳ ಕಾರಣ ಆರ್ಥಿಕ ರಚನೆಯೇ; ಸಮಾಜವಾದ ವಿವಿಧರೀತಿಯಲ್ಲಿ ವಿಕಾಸಗೊಳ್ಳದೇ ಏಕಮಾತ್ರಸ್ವರೂಪ ಉಳ್ಳದ್ದು, ಎಂಬ ನಂಬಿಕೆಗಳಿಗೆ ವೈಜ್ಞಾನಿಕ ಆಧಾರವಿಲ್ಲವೆಂಬ ಈ ಅರಿವು ಅವರಿಗೆ ಪ್ರಾಪ್ತವಾಗಬಲ್ಲದು.

ಪರಿವರ್ತನೆಗೆ ಒಳಗಾದ ಈ ಪ್ರಪಂಚದಲ್ಲಿ ಬಾಗದ ಬಳುಕದ ರೂಢಿಸಮ್ಮತವಾದ ಅಭಿಪ್ರಾಯಗಳನ್ನೇ ಸಮರ್ಥಿಸಲು ಸಾಧ್ಯವಿಲ್ಲ. ನಾವು ವೈಜ್ಞಾನಿಕ ಮನೋಭಾವ ಉಳ್ಳವರಾಗಿರಬೇಕು, ವಸ್ತುಸ್ಥಿತಿಯ ಪರಿಜ್ಞಾನವನ್ನು ಪಡೆದಿರಬೇಕು, ತೆರೆದ ಮನಸ್ಸುಳ್ಳವರಾಗಿರಬೇಕು. ನಮ್ಮ ದೃಷ್ಟಿ ಮತ್ತು ನಮ್ಮ ದಾರಿ ರಚನಾತ್ಮಕವಾದದ್ದಾಗಿರಬೇಕು. ಪಾರ್ಲಿಯಮೆಂಟರಿ ಪದ್ಧತಿಯ ಪ್ರಜಾತಂತ್ರದಲ್ಲಿ, ಉಚ್ಚವರ್ಗಗಳಿಗಿಂತಲೂ ದುಡಿತವರ್ಗದ ಉದ್ಧಾರಕ್ಕೆ ಹುರುಪುಕೊಡುವ ಪ್ರಗತಿಸೂಚಕವಾದ ಅಂಶಗಳನ್ನು ಗಮನಿಸಬೇಕು. ದುಡಿಮೆ ವರ್ಗದ ಜನ ತಮ್ಮ ಹಕ್ಕನ್ನು ಹೋರಾಟವಿಲ್ಲದೆ ಸಂಪಾದನೆಮಾಡಿಕೊಳ್ಳಲಾರರೆಂದೂ, ನೂತನಸಮಾಜಸೃಷ್ಟಿಗೆ ಬಲಪ್ರಯೋಗವೊಂದೇ ಸಾಧಕವೆಂಬುದೂ ವಾಸ್ತವಾಂಶಗಳಿಗೆ ವಿರೋಧವಾಗಿವೆ. ಕ್ರಾಂತಾತ್ಮಕ ಸಮಾಜವಾದವನ್ನು ಸಮರ್ಥಿಸುವ ಸಮತಾವಾದಿಗಳು ಅಹಿಂಸಾತ್ಮಕ ಕ್ರಾಂತಿಗಳು ಸಾಧ್ಯವೆಂಬುದನ್ನು ಮರೆಯುತ್ತಾರೆ. ಯಾವುದೋ ಒಂದು ತತ್ವಪೋಷಣೆಗಾಗಿ ಸಾಮಾನ್ಯ ಜನರಲ್ಲಿರುವ ಭಯಭೀತಿಗಳನ್ನೂ ಆಸೆ ಆಕಾಂಕ್ಷೆಗಳನ್ನೂ, ರಾಗದ್ವೇಷಗಳನ್ನೂ ದುರುಪಯೋಗ ಪಡಿಸಿಕೊಳ್ಳುವುದು ವಿವೇಕದ ದಾರಿಯಲ್ಲ.

ಸಮಾಜವಾದವು ಸಾಮಾಜಿಕ ನ್ಯಾಯವನ್ನು ಸ್ಪಷ್ಟವಾದ ರೀತಿಯಲ್ಲಿ ಪ್ರತಿಪಾದಿಸುವುದೇನೋ ಸರಿ. ಆದರೆ ವ್ಯಕ್ತಿಗತವಾದ ಹಕ್ಕುಗಳನ್ನು ತಿರಸ್ಕರಿಸುವುದರಲ್ಲಿ ಅದು ದೊಡ್ಡ ತಪ್ಪುಮಾಡಿದೆ. ಜಗದ್ವ್ಯಾಪಕವಾದ ಸಾಮಾಜಿಕ ಪರಿವರ್ತನೆಯ ಸವಾಲನ್ನು ಎಲ್ಲ ಸಮಾಜವ್ಯವಸ್ಥೆಗಳೂ ಎದುರಿಸಬೇಕಾದುದೇನೋ ಅಗತ್ಯ. ಹಾಗೆ ಮಾಡುವಾಗ ವ್ಯಕ್ತಿಯನ್ನು ಧರ್ಮದಿಂದಲೂ ದಯೆಯಿಂದಲೂ ಆದರಿಸಬೇಕು. ನಿರಂಕುಶಾಧಿಕಾರ

ರಾಷ್ಟ್ರ ಸಂಸ್ಥೆಗಳಲ್ಲಿ (Totalitarian systems) ವ್ಯಕ್ತಿಯ ಹಕ್ಕುಗಳು ಮೆಟ್ಟಲ್ಪಟ್ಟಿರುತ್ತವೆ. ವರ್ಗರಹಿತ ಸಮಾಜವಿದ್ದಮಾತ್ರಕ್ಕೆ ಅಲ್ಲಿ ಜನರೆಲ್ಲರೂ ಒಂದೇತರದವರು, ಅವರ ಹಿತಗಳನ್ನು ಒಂದು ಪಕ್ಷ ಪ್ರತಿನಿಧಿಸಬಲ್ಲದು ಎಂದು ಅರ್ಥವಾಗುವುದಿಲ್ಲ. ಏಕಪಕ್ಷ ವ್ಯವಸ್ಥೆ ಹೊಸಬಗೆಯ ಅಸಮಾನತೆಗಳ ಸೃಷ್ಟಿಯನ್ನು ಮತ್ತು ಅವುಗಳ ಸ್ಥಿತಿಯನ್ನು ಅಳವಡಿಸಿಕೊಳ್ಳಲು ಒಂದು ಉಪಾಯ. ರಷ್ಯಾ ಸಮಾಜ ಎಲ್ಲ ವರ್ಗದ ಜನರಲ್ಲಿ ಭ್ರಾತೃಭಾವ ಮತ್ತು ಸಂಘಟನೆಯನ್ನು ವೃದ್ಧಿಗೊಳಿಸಿಲ್ಲ. ಸಾಮಾಜಿಕ ಅಡ್ಡಗಟ್ಟುಗಳು ಇನ್ನೂ ಇವೆ. ರಷ್ಯದ ರಾಜರ ಕಾಲದಲ್ಲಿದ್ದಂತೆ ಈಗಲೂ ಮೇಲೊಂದು ಶ್ರೇಷ್ಠವರ್ಗವಿದೆ. ಕೆಳಗೆ ಸ್ವಾತಂತ್ರ್ಯವೇನೆಂದು ಅರಿಯದ, ನ್ಯಾಯವೇನೆಂದು ಕಾಣದ, ತಮ್ಮ ಜೀವನವನ್ನು ಉತ್ತಮಪಡಿಸಿಕೊಳ್ಳಲು ಅನುಕೂಲವಿಲ್ಲದ, ದುಡಿಮೆಗಾರರ ರೈತರ ದೊಡ್ಡ ಗುಂಪು ಇವೆ.

ಸ್ತಂಭಾಕೃತಿಯ ಅಖಂಡ ಶಿಲೆಯಂತೆ ಇರುವ ಈ ರಾಜ್ಯಸಂಸ್ಥೆಯಲ್ಲಿ ಎಲ್ಲ ರೀತಿಯ ಅಧಿಕಾರಗಳು ಅಂದರೆ ಆರ್ಥಿಕ, ರಾಜಕೀಯ ಧಾರ್ಮಿಕ ಅಧಿಕಾರಗಳು, ಗೋಪುರಾಕೃತಿಯ ಸಮಾಜದ ಶಿಖರದಲ್ಲಿ ಕೇಂದ್ರೀಕೃತವಾಗಿರುತ್ತವೆ. ಅಲ್ಲಿ ಕೆಲವರು ಎಲ್ಲವನ್ನೂ ಬಲ್ಲವರು, ಎಲ್ಲವನ್ನೂ ಮಾಡಬಲ್ಲವರು, ಎಲ್ಲವನ್ನೂ ತೀರ್ಮಾನಿಸುವವರಾಗಿರುತ್ತಾರೆ. ಇದು ಮಾರ್ಕ್ಸ್‌ನ ದೃಷ್ಟಿಯ ಮಾನವೀಯತೆಯ ಆದರ್ಶವನ್ನು ಪೂರೈಸುವುದಿಲ್ಲ. ಜೀವನವು ಅರ್ಥವಿಲ್ಲದ ಆಕಸ್ಮಿಕ ಘಟನೆ ಎಂದೂ ಈ ಅಗಾಧವಾದ ಕಾವಿಲ್ಲದ ಕಾಳರಾತ್ರಿಯ ಆಕಾಶದಲ್ಲಿ ನೆಲೆ ಇಲ್ಲದವರಾಗಿದ್ದೇವೆಂದೂ, ನಮ್ಮ ಮನುಷ್ಯತ್ವದಲ್ಲಿ ಯಾವ ಮಹತ್ವವಿಲ್ಲವೆಂದೂ ನಂಬಿದರೆ, ಆಗ ನಮ್ಮ ಸಾರಭೂತವಾದ ಹಕ್ಕುಗಳನ್ನು ಯಾರು ಕಸಿದುಕೊಂಡರೂ ನಾವು ನಿರ್ಲಕ್ಷ್ಯದಿಂದಿರುತ್ತೇವೆ.

ಸಮತಾವಾದಿಗಳು ಅವಲಂಬಿಸಿರುವ ಈ ವ್ಯಕ್ತಿತತ್ವ ವ್ಯಕ್ತಿಯನ್ನು ಗುಲಾಮನನ್ನಾಗಿ ಅಥವಾ ಕೀಲು ಗೊಂಬೆಯನ್ನಾಗಿ ಮಾಡುತ್ತದೆ. ವ್ಯಕ್ತಿಯು ವ್ಯವಹಾರ ಮಾಡುವ ಜಾಗ್ರತಚಿತ್ತ ಅವನ ನಿಜವಾದ ಚಿತ್ತಕ್ಕಿಂತಲೂ ಅಲ್ಪವಾದದ್ದೆಂದೂ, ಈ ನಿಜವಾದ ಚಿತ್ತ ಅವನ ರಾಷ್ಟ್ರೀಯ ಸಂಸ್ಕೃತಿಯಿಂದ ರೂಪುಗೊಂಡಿರುವುದೆಂದೂ ಹೆಗೆಲ್ ಹೇಳುತ್ತಾನೆ. ಈ

ರಾಷ್ಟ್ರೀಯ ಸಂಸ್ಕೃತಿ ರಾಜ್ಯಸಂಸ್ಥೆಯಲ್ಲಿ ಸಮಾವೇಶವಾಗಿದೆ ಎಂದೂ ಇದು ಯಾವಕಾರ್ಯ ಕೈಗೊಂಡರೂ ಐತಿಹಾಸಿಕ ತರ್ಕದ ಆದೇಶದಂತೆ ನಡೆದುಕೊಳ್ಳುವುದೆಂದೂ ಹೇಳುತ್ತಾನೆ. ಮಾರ್ಕ್ಸ್ ಈ ವಾದವನ್ನು ತಲೆಕೆಳಗು ಮಾಡಿ ಪ್ರತ್ಯೇಕವಾದ ವಿವರಣೆಯನ್ನು ಸೂಚಿಸುತ್ತಾನೆ. ಅವನು ಹೀಗೆ ಹೇಳುತ್ತಾನೆ. "ಅವರ ಅಸ್ತಿತ್ವವನ್ನು ವ್ಯಕ್ತಿಗಳು ತಮ್ಮ ಚೇತನ ದಿಂದ ನಿರ್ಧಾರಮಾಡಿಕೊಳ್ಳುವುದಿಲ್ಲ, ಆದರೆ ಅವರ ಸಾಮಾಜಿಕ ಅಸ್ತಿತ್ವ ಅವರ ಚೇತನವನ್ನು ವಿಧಾಯಕಗೊಳಿಸುತ್ತದೆ"

ಸಮಾಜ ಸಂಸ್ಕರಣ ಕಾತರನಾಗಿದ್ದ ಮಾರ್ಕ್ಸ್, ಸಮಾಜದ ದೋಷ ಗಳ ಕೊರತೆಗಳಿಗೆ ಕೆಟ್ಟ ಬಾಹ್ಯ ಪರಿಸ್ಥಿತಿಗಳೇ ಕಾರಣವೆಂದು ಹೇಳು ತ್ತಾನೆ. ಹಿಂದೆ ಸಮಾಜದ ವ್ಯವಸ್ಥೆ ಕೆಟ್ಟದ್ದಾಗಿದ್ದುದರಿಂದಲೇ ವ್ಯಕ್ತಿಯ ನೀತಿಯೂ ಕೆಟ್ಟಿತ್ತು ಎಂಬ ಭಾವನೆ ಇದು. ಈ ವರ್ಗವ್ಯವಸ್ಥೆಯಲ್ಲಿ ಬಹು ಸಂಖ್ಯೆಯಲ್ಲಿ ಜನರು ಉತ್ಪತ್ತಿ ಸಾಧನಗಳನ್ನು ಪಡೆದಿದ್ದ ಒಡೆಯರಿಗೆ ತಮ್ಮ ದುಡಿಮೆಯನ್ನು ಮಾರಿ ಜೀವಿಸಬೇಕಾಗಿತ್ತು. ಈ ಒಡೆಯರು ದುಡಿಮೆಗಾರರ ಅವಶ್ಯಕತೆಯನ್ನೂ ಅರಿತು ಅವರನ್ನು ಶೋಷಣೆ ಮಾಡ ತೊಡಗಿದರು. ಪ್ರತಿ ದುಡಿಮೆಗಾರನಿಗೂ ಅವನು ಪ್ರಾಣದಿಂದಿದ್ದು ದುಡಿ ಯುವ ಶಕ್ತಿಯುಳ್ಳವನಾಗಿರಲು ಎಷ್ಟು ಬೇಕೋ ಅಷ್ಟನ್ನು ಮಾತ್ರ ಕೊಟ್ಟು ಬಂದ ಲಾಭದಲ್ಲಿ ಮಿಕ್ಕೆಲ್ಲವನ್ನೂ ತಾವು ಕಬಳಿಸುತ್ತಿದ್ದರು. ಈ ಏರ್ಪಾಡಿಗೆ ಬದಲು ಸಮತಾವಾದಸಮಾಜ ಬಂದರೆ ಶ್ರೀಮಂತರಿಗೂ ಬಡವರಿಗೂ ಸಹಾಯವಾದೀತು. ಶ್ರೀಮಂತರು ಅವರ ಸಂಪತ್ತಿನ ಢಾಂಭಿಕ ಪ್ರದರ್ಶನ, ದುರಹಂಕಾರ, ಸ್ವಾರ್ಥ, ಪ್ರತಿಷ್ಠೆ ಇವುಗಳನ್ನು ಬಿಡುವರು. ಬಡವರು ಅವರ ಅಜ್ಞಾನ, ದಾಸ್ಯವೃತ್ತಿ ಮತ್ತು ಮಾನಭಂಗ ಗಳನ್ನು ತಪ್ಪಿಸಿಕೊಳ್ಳುವರು.

ಸಮಾಜದಲ್ಲಿದ್ದು ಮನುಷ್ಯ ವಿವೇಕಿಯಾಗುತ್ತಾನೆ ನೀತಿವಂತನಾಗು ತ್ತಾನೆಂಬುದು ನಿಜ. ಆದರೆ ವೈಯಕ್ತಿಕ ಸಂಬಂಧಗಳಿಗಿಂತಲೂ ಸಾಮಾಜಿಕ ಹಿತಗಳೇ ಮುಖ್ಯವೆಂದು ಎಣಿಸಲಾಗದು. ಒಂದು ಗಿಡ, ಮಣ್ಣು ಗಾಳಿ ಮತ್ತು ನೀರಿಲ್ಲದೆ ಬದುಕಿರಲು ಸಾಧ್ಯವಿಲ್ಲ, ಆದರೆ ಅದು ಇವೆಲ್ಲಕ್ಕೂ ಪ್ರತ್ಯೇಕ. ನಾವು ಸಂಪೂರ್ಣವಾಗಿ ಸಮಾಜದಲ್ಲೇ ಮುಳುಗಿದ, ಯಾವಾ

ಗಲೂ ಪಾತ್ರ ನಿರ್ವಹಣೆಗೆ ನಿಂತಿರುವ ವೇಷಧಾರಿಗಳಲ್ಲ. ಮಾನವನ ಬದುಕಿಗೆ ಅವನ ಅಂತರಂಗದಲ್ಲಿ ಏನು ನಡೆಯುತ್ತಿದೆ, ಅವನ ಹೃದಯ ದಲ್ಲಿ ಮತ್ತು ಮನಸ್ಸಿನಲ್ಲಿ ಹುಟ್ಟುವುದು ಏನು, ಬಾಡುವುದು ಏನು, ಇವೆ ಲ್ಲವೂ ಮುಖ್ಯ. ಕಲೆ, ವಿಜ್ಞಾನ, ಸಾಹಿತ್ಯ ಇವೆಲ್ಲವೂ ಉಕ್ಕಿಬರುವ ಮಾನವನ ಅಂತರಾತ್ಮದ ವಿಷಯದಲ್ಲಿ ನಾವು ಗೌರವಭಾವ ತಾಳಬೇಕು. ಮಾರ್ಕ್ಸ್‌ಗೆ, ಸಮಾಜಕ್ಕಿಂತಲೂ ವ್ಯಕ್ತಿ ಮುಖ್ಯ. ಯಾವ ಸಮಾಜದಲ್ಲಿ ಅದರ ಪ್ರತಿ ಸದಸ್ಯನಿಗೂ ತುಂಬಿದ ಬದುಕು, ಸ್ವತಂತ್ರವಾದ ಬಾಳು, ಸಾಧ್ಯವಾಗುವುದೋ ಆ ಸಮಾಜವೇ ಸುವ್ಯವಸ್ಥಿತ ಸಮಾಜ. ಮಾರ್ಕ್ಸ್‌ನ ಈ ಮೂಲಭೂತವಾದ ಗುರಿಯನ್ನು ನಾವು ಮರೆತರೆ, ನಮ್ಮ ಮುಂದೆ ನಮ್ಮ ಮೆಚ್ಚಿಗೆಗಾಗಿ ಇಟ್ಟಿರುವ ಒಂದು ಸಾಮೂಹಿಕ ಮಾನವ ಶಕ್ತಿಯ ಪ್ರತಿಮೆಗೆ ತಲೆಬಾಗಿದಂತಾಗುತ್ತದೆ.

ಸನ್ನಿವೇಶದ ಫಲವಾದ ಅನೇಕ ಸಾಮಾಜಿಕ ಕೆಡುಕುಗಳಿವೆ; ಕುರೂಪ, ಕಸ, ಕಾಯಿಲೆ, ಮತ್ತು ನ್ಯೂನ ಆಹಾರ. ಈ ಕೆಡುಕು ಗಳಿಗೆಲ್ಲ ಆರ್ಥಿಕ ಕಾರಣಗಳೇ ಮೂಲವಲ್ಲ. ಮಾನವನ ಹೃದಯದಲ್ಲಿ ತಾಂಡವವಾಡುವ ರಾಗದ್ವೇಷಗಳು, ಮಾನವರ ನೋವನ್ನು ಕಂಡೂ ಮನಸ್ಸು ಕರಗದ ಔದಾಸೀನ್ಯ, ಆಳಬೇಕೆಂಬ ಆಸೆ, ಕೆಡುಕಿನ ಈ ಎಳೆಗಳು ನಮ್ಮ ಸ್ವಭಾವದಲ್ಲಿ ಹೆಣೆದುಕೊಂಡಿವೆ. ಸ್ವಭಾವಸಿದ್ಧವಾದ ಪಾಪದ (orignal sin) ಸಿದ್ಧಾಂತ ದೇವತಾಶಾಸ್ತ್ರಜ್ಞರು ಕಂಡುಹಿಡಿದದ್ದಲ್ಲ. ಬಾಹ್ಯಸನ್ನಿವೇಶದಲ್ಲಿ ಬದಲಾವಣೆ ಮಾಡುವುದರಿಂದಲೇ ಮಾನವಸ್ವಭಾವ ದಲ್ಲಿರುವ ಮೊಂಡತನವನ್ನು ಬಗ್ಗಿಸುವುದು ಸಾಧ್ಯವಿಲ್ಲ. ಮಾರ್ಕ್ಸ್‌ವಾದದ ನಿರೀಕ್ಷೆ ಪೂರ್ತಿಯಾಗಿ ಪ್ರಾಪಂಚಿಕವಾದದ್ದು. ಇದರಲ್ಲಿ ರಹಸ್ಯಗರ್ಭಿತ ವಾದದ್ದು ಏನೂ ಇಲ್ಲ. ಮಾನವನ ಬುದ್ಧಿಯು ವ್ಯವಸಾಯಕ್ಕಾಗಿ ಮತ್ತು ಪದಾರ್ಥ ನಿರ್ಮಾಣಕ್ಕಾಗಿ ಮಾತ್ರ ಮೀಸಲಾಗಿಲ್ಲ. ಆಶ್ಚರ್ಯ ಅನುರಾಗ ಗಳೂ ಇವನ ಜೀವಿತದ ಇಂಗಿತಗಳಾಗಿವೆ. ವಿಜ್ಞಾನ ನಮಗೆ ಸಾಮಾರ್ಥ್ಯ ನೀಡುತ್ತದೆ, ಆದರೆ ದಿವ್ಯದೃಷ್ಟಿಯನ್ನಲ್ಲ. ನಮಗೆ ಬಲ ನೀಡು ತ್ತದೆ, ನ್ಯಾಯವನ್ನಲ್ಲ. ಮನುಷ್ಯನು ದೇಹ ಮತ್ತು ಮನಸ್ಸು ಮಾತ್ರ ವಲ್ಲ; ಅವನು ಒಂದು ಆತ್ಮನೂ ಹೌದು.

ಮತಧರ್ಮ ನಮ್ಮ ಉತ್ಕೃಷ್ಟಸ್ವಭಾವವನ್ನು ಅಂದರೆ ವಿವೇಚನಾಶಕ್ತಿ ಸಹಕಾರ ಮನೋಭಾವ, ಸ್ನೇಹಗಳನ್ನು, ಬೆಳೆಸಿಕೊಳ್ಳಿರೆಂದು ಹೇಳುತ್ತದೆಯೇ ವಿನಹ ನಮ್ಮಲ್ಲಿ ಭಯ, ಲೋಭ, ಕ್ರೋಧಗಳನ್ನು ಹೆಚ್ಚು ಮಾಡುವುದಿಲ್ಲ. ಆದರೆ ಕ್ರಾಂತಿಕಾರಕ ಚಳುವಳಿಗಳು ತಮ್ಮ ಆವೇಗ ಆವೇಶಗಳನ್ನು ದ್ವೇಷದಿಂದ ಪಡೆಯುತ್ತವೆಯೇ ಹೊರತು ಪ್ರೀತಿಯಿಂದಲ್ಲ. ಈ ದ್ವೇಷ ಯಾವುದೋ ಒಂದು ನಿರ್ದಿಷ್ಟ ಮಾನವವರ್ಗದ ಮೇಲೆ ಸೇಡುತೀರಿಸಿಕೊಳ್ಳುತ್ತದೆ. ಈ ವರ್ಗದ ಜನ ಯಜ್ಞಪಶುಗಳಾಗುತ್ತಾರೆ. ಅವರು ಯಹೂದ್ಯರಾಗಿರಬಹುದು, ಕ್ರೈಸ್ತರಾಗಿರಬಹುದು, ಬಂಡವಾಳಗಾರರಾಗಿರಬಹುದು ಅಥವಾ ಸಮತಾವಾದಿಗಳೂ ಆಗಿರಬಹುದು. ಸಮತಾವಾದಿಗಳೂ ಸಮತಾವಾದಿಗಳಲ್ಲದವರೂ ಸಾಮಾಜಿಕ ಜೀವನದ ಅಂತಿಮ ಗುರಿಯನ್ನು ಕುರಿತು ಸದೃಶವಾದ ಕಲ್ಪನೆಗಳನ್ನೇ ಹೊಂದಿರುತ್ತಾರೆ. ಉಪಾಯ ಉಪೇಯಗಳ ಪರಸ್ಪರಾವಲಂಬನವನ್ನು ನಂಬುತ್ತಾರೆ. ಆದರೆ ಉಪಾಯ ಉಪೇಯಗಳ ಪರಸ್ಪರ ಸಂಬಂಧಗಳ ವಿಷಯದಲ್ಲಿ ಮಾತ್ರ ಸಮಾನಾಭಿಪ್ರಾಯ ಉಳ್ಳವರಾಗಿಲ್ಲ. ನಿಸ್ಸಂಶಯವಾಗಿ ಈ ಇಬ್ಬರೂ ಮಾನವ ಸುಖದ ಮೌಲ್ಯಗಳಿಂದಲೇ ಬೆಲೆಯನ್ನು ನಿಷ್ಕರ್ಷಿಸುತ್ತಾರೆ.

ಮಾನವ ಸ್ವಭಾವ ಎಷ್ಟೇ ಕೆಟ್ಟದ್ದರೂ ಅದು ಒಳ್ಳೆಯತನದ ಶಕ್ತಿಗೆ ಯಾವಾಗಲೂ ಬಾಗದೇ ಇರುವುದಿಲ್ಲ ಎಂದು ಮತಧರ್ಮ ನಂಬುತ್ತದೆ. ಏಸುವಿನ ಕಥೆ ಅಪರಿಮಿತ ಒಳ್ಳೆಯತನವನ್ನು ಜಗತ್ತು ಜೀರ್ಣಿಸಿಕೊಳ್ಳಲಾರದ ಕಥೆ. ಭೌತಶಕ್ತಿಯ ಪ್ರಯೋಗದಿಂದ ಏಸು ತನ್ನ ಶಿಷ್ಯರನ್ನು ಭೂಮಿಯ ಮೇಲೆ ಆಧಿಪತ್ಯ ಸ್ಥಾಪಿಸಲು ಒಯ್ಯಲಿಲ್ಲ. ಆದರೆ ಕ್ರೈಸ್ತರಾಷ್ಟ್ರಗಳು ಮಾನವ ವ್ಯವಹಾರಗಳಲ್ಲಿ ನ್ಯಾಯ ಮತ್ತು ಶಿಸ್ತು ಏರ್ಪಡಿಸುವ ಸಲುವಾಗಿ ಬಲಪ್ರಯೋಗ ಮಾಡಲು ಅನುಮತಿ ನೀಡಿದುವು. ಮಾನವ ಚೇತನರನ್ನು ಒಲಿಸಿ ಅವರ ಆತ್ಮಗಳನ್ನು ಉಪಶಮನಗೊಳಿಸಲು ಸಂತರೆಂದೂ ಬಲದ ಪ್ರಯೋಗ ಮಾಡಲಿಲ್ಲ. ಸ್ವಾಭಾವಿಕವಾಗಿಯೇ ಪರಮಾರ್ಥಸಿದ್ಧಿಗೆ ಬಲಪ್ರಯೋಗ ಯೋಗ್ಯವಾದದ್ದಲ್ಲ. ಅಪೂರ್ಣವಾದ ಜಗತ್ತಿನಲ್ಲಿ ಆದರ್ಶಮಯವಾದ ಕಾರ್ಯಕ್ರಮ ಕೈಗೊಳ್ಳಲು ಅನೇಕ ಸಲ ಸಾಧ್ಯವಿಲ್ಲವಾಗುತ್ತದೆ. ಸಮತಾವಾದಿ ಮತ್ತು ಸಮತಾವಾದಿಯಲ್ಲದ

ರಾಷ್ಟ್ರಗಳೆರಡೂ ಪರಾಕ್ರಮಣದ ಉದ್ದೇಶಕ್ಕೆ ಮಾತ್ರ ಬಲವನ್ನು ಉಪಯೋಗಿಸಬಾರದೆಂದು ಒಪ್ಪಿಕೊಂಡಿರುವುವು. ಪರಾಕ್ರಮಣವನ್ನು ಪ್ರತಿಭಟನೆ ಮಾಡುವಾಗ, ತೀರ ಅವಶ್ಯಕವಾಗಿ ಎಷ್ಟು ಬಲಪ್ರಯೋಗಬೇಕೋ ಅಷ್ಟನ್ನು ಮಾತ್ರ ಮಾಡಬೇಕೆಂದೂ ಒಪ್ಪಿಕೊಂಡಿವೆ.

ಸಮತಾವಾದದಲ್ಲಿ ಮತ್ತೊಂದು ಪ್ರಧಾನವಾದ ದೋಷವಿದೆ. ಧಾರ್ಮಿಕರು, ಅವರ ಆಚರಣೆ ಏನೇ ಆಗಿರಲಿ, ಎಲ್ಲರನ್ನೂ, ನಮ್ಮ ಶತ್ರುಗಳನ್ನೂ ಸಹ ಪ್ರೀತಿಯಿಂದ ಕಾಣಬೇಕೆಂದು ನಂಬುತ್ತಾರೆ. ಆದರೆ ಸಮತಾವಾದಿಗಳು ಮಾತ್ರ ಶತ್ರುಗಳ ವಿಷಯದಲ್ಲಿ ದ್ವೇಷವಿರಬೇಕೆಂದು ಪ್ರೋತ್ಸಾಹಿಸುತ್ತಾರೆ. ಅಷ್ಟು ಮಾತ್ರವಲ್ಲದೆ ಅವರ ವಿಷಯದಲ್ಲಿ ನಿರ್ದಾಕ್ಷಿಣ್ಯ ನಿರ್ದಯಪೂರ್ವಕವಾದ ವರ್ತನೆಯನ್ನೂ ಪ್ರಚೋದಿಸುತ್ತಾರೆ. ಮತಧರ್ಮಗಳು ವಿಶ್ವ ನೀತಿಯನ್ನು ಪ್ರತಿಪಾದಿಸುತ್ತವೆ. ಪ್ರತಿ ವ್ಯಕ್ತಿಯೂ, ಅವನು ಯಾವ ವರ್ಗಕ್ಕೇ ರಾಷ್ಟ್ರಕ್ಕೇ ಸೇರಿರಲಿ ಭಗವಂತನ ಜಂಗಮವಿಗ್ರಹವನ್ನು ಧರಿಸಿರುತ್ತಾನೆ. ಪಾರಮಾರ್ಥಿಕ ಪ್ರೇಮದ ಭಾವಗರ್ಭಿತ ದೃಷ್ಟಿ ವಿಶ್ವವ್ಯಾಪಕವಾದದ್ದು.

## ೭. ಅಧಿಕಾರವಾದ

ಶ್ರದ್ಧೆಯಸ್ಥಾನಕ್ಕೆ ಶಾಸ್ತ್ರ ಬಂದಾಗ ಅದು ನಮ್ಮಿಂದ ಕೇಳುವುದು ವಿಧೇಯತೆಯನ್ನೊಂದೇ. ಅಧಿಕಾರದ ಕಡುಬಯಕೆಯಲ್ಲಿ, (ವಿಚಾರಾತ್ಮಕ) ಸಂದೇಹವಾದಿಕ್ಕೆ ಸ್ಥಾನವಿಲ್ಲ. ಮತಧರ್ಮದ ನಂಬಿಕೆಗೂ ವಿಮರ್ಶಾತ್ಮಕ ಪಾಂಡಿತ್ಯಕ್ಕೂ ಸಮನ್ವಯಮಾಡುವ ಪ್ರಯತ್ನಗಳು ಹಾನಿಕರವೆಂದು ಬಗೆಯುತ್ತದೆ. ನಮಗೆ ಬೇರುಗಳಿರಬೇಕು, ಒಂದು ಪವಿತ್ರಗ್ರಂಥ ಅಥವಾ ಒಂದು ವ್ಯವಸ್ಥಾಯುತವಾದ ಮತಸಂಪ್ರದಾಯ ಇವುಗಳನ್ನು ಅವಲಂಬಿಸಿದ ಹೊರತು ಬೇರುಗಳಿರಲು ಸಾಧ್ಯವಿಲ್ಲ ಎನ್ನುತ್ತದೆ.

ತನ್ನ ಸತ್ಯವೇ ಆತ್ಯಾಂತಿಕಸತ್ಯವೆಂದು ಬೋಧಿಸುವ ಮತಧರ್ಮವನ್ನು ನಾವು ಅವಲಂಬಿಸಿದಾಗ ಅಂತಹ ಮತಧರ್ಮ ಸ್ವತಂತ್ರ ಮನೋಧರ್ಮ ಉಳ್ಳವರನ್ನು ಸೃಷ್ಟಿಸುವ ಬದಲು, ಅಂಧಶ್ರದ್ಧೆಯ ಆವೇಶದಿಂದ ತುಂಬಿದ ಸ್ತ್ರೀಪುರುಷರನ್ನು ಸೃಷ್ಟಿಸುತ್ತದೆ.

ಬುದ್ಧಿಯನ್ನು ತಿರಸ್ಕರಿಸಿ ಶ್ರದ್ಧೆಯನ್ನು ಪುರಸ್ಕರಿಸಿದಾಗ ನಾವು

ಸರ್ವಾಧಿಕಾರಿಗಳ ಕೈಯಲ್ಲಿ ಸಿಕ್ಕಿಕೊಳ್ಳುತ್ತೇವೆ. ನಂಬಲು ಮತ್ತು ಅನುಷ್ಠಾನ ಮಾಡಲು ಇವರು ಸಿದ್ಧಗೊಳಿಸಿದ ಮತಗಳನ್ನು ನಮಗೆ ನೀಡಬಲ್ಲೆವು ಎನ್ನುತ್ತಾರೆ. ಇಂತಹ ಸರ್ವಾಧಿಕಾರ ಮತಧರ್ಮದಲ್ಲಿ ಔದಾರ್ಯವಾಗಲೀ ಪ್ರಜಾಸಮ್ಮತಿಯಾಗಲೀ ಕಾಣುವುದಿಲ್ಲ. ಅದು ಅತಿ ಸುಲಭವಾಗಿ ರಾಜಕೀಯ ಸರ್ವಾಧಿಕಾರದೊಡನೆ ಮಿತ್ರತ್ವ ಬೆಳೆಸುತ್ತದೆ.

ಕ್ಷತ್ರಿಯನಿಗೆ ಸಮಾಜದಲ್ಲಿ ಗೊತ್ತಾದ ವರ್ಣಧರ್ಮವನ್ನು ನೆರವೇರಿಸಲು ಅರ್ಜುನನು ನಿರಾಕರಿಸಿದ ಪ್ರಕರಣದಿಂದ ಭಗವದ್ಗೀತೆ ಪ್ರಾರಂಭವಾಗುತ್ತದೆ. ತನ್ನ ಧರ್ಮವನ್ನು ತಾನೇ ನಿರ್ಣಯಿಸಕೊಳ್ಳಬೇಕೆಂದೂ ಸಮಾಜ ಇದನ್ನು ತನ್ನ ಮೇಲೆ ಹೊರಿಸಬಾರದೆಂದೂ ಹಠಮಾಡುತ್ತಾನೆ. ಅಗತ್ಯವಾದರೆ, ತನ್ನಿಂದ ತಾನು ದೂರ ಸರಿಯುವ ಬದಲು ತನ್ನ ಸಮಾಜದಿಂದ ದೂರ ಸರಿಯಲು ಸಿದ್ಧನಾಗುತ್ತಾನೆ. ಇವನ ಗುರು ವಿಶ್ವದ ಹಿಂಬದಿಯಲ್ಲಿರುವ ಅಧ್ಯಾತ್ಮತತ್ವವನ್ನು ವಿವರಿಸಿ ಅರ್ಜುನನ್ನು ಅವನ ಇಚ್ಛೆ ಬಂದಂತೆ ಮಾಡಲು ಬಿಡುತ್ತಾನೆ. ಅರ್ಜುನ ಅಭ್ಯಾಸಬಲದಿಂದಾಗಲಿ, ಅಧಿಕಾರಕ್ಕೆ ಅಧೀನನಾಗಿಯಾಗಲಿ ತನ್ನ ಕರ್ಮವನ್ನು ಎಸಗಲಾಗದು. ತನ್ನ ಆತ್ಮ ನಿಷ್ಠೆಯನ್ನು ಉಳಿಸಿಕೊಳ್ಳಬೇಕು. ಆತನ ನಿರ್ಣಯಗಳು ಆತನಿಂದಲೇ ಸ್ವತಂತ್ರವಾಗಿ ಮಾಡಿಕೊಂಡವಾಗಿರಬೇಕು. ಸ್ವತಂತ್ರ ಚೇತನರಲ್ಲಿ, ಸುಖಾಭಿಲಾಷೆಗಿಂತಲೂ ನೆಮ್ಮದಿಯ ಬಯಕೆಗಿಂತಲೂ ಆತ್ಮಗೌರವದ ಗಾಢಾನುರಾಗ ಪ್ರಬಲವಾಗಿರುತ್ತದೆ.

ಅಧಿಕಾರಯುತ ಮತಧರ್ಮಗಳು ಒಂದು ಕೊನೆ, ನಾಸ್ತಿಕ್ಯ ಮತ್ತೊಂದು ಕೊನೆ. ಇವು ಪರಸ್ಪರ ವಿರೋಧವುಳ್ಳವುಗಳಾದರೂ ಎರಡೂ ಒಂದೇ ರೀತಿಯ ಅಂಧಶ್ರದ್ಧೆಗೆ ಬಲಿಯಾಗಿವೆ. ಇವು ಮಾನವನ ಇಚ್ಛಾಸ್ವಾತಂತ್ರ್ಯವನ್ನಾಗಲೀ ಅವನ ಕರ್ತೃತ್ವವನ್ನಾಗಲೀ ಒಪ್ಪುವುದಿಲ್ಲ. ಅವು ಮಾನವನ ಅಭಿಕ್ರಮಶಕ್ತಿಯನ್ನು ಕಡೆಗಣಿಸುವುವಲ್ಲದೆ ಅವನ ಮನುಷ್ಯತ್ವಕ್ಕೇ ಸಂಚಕಾರ ತರುತ್ತವೆ. ಅತಿಯಾಗಿ ಹೋಗುವ ಅಧಿಕಾರವಾದಗಳಲ್ಲಿ, ಅದು ಧಾರ್ಮಿಕವಾಗಿರಲಿ ಅಥವಾ ರಾಜಕೀಯವಾಗಿರಲಿ, ಮನುಷ್ಯರನ್ನು ಪ್ರಚೋದನೆಗೆ ಒಳಗಾಗುವ ಯಂತ್ರಗಳನ್ನಾಗಿ ಮಾಡುವ ಒಲವಿದೆ. ಮನುಷ್ಯರು ಮುಖಂಡರ ಕಟ್ಟಪ್ಪಣೆಗಳಿಗೆ ಬಲಿಯಾಗುವ ಕೀಲುಗೊಂಬೆಗಳಾಗುತ್ತಾರೆ.

## ೮. ಸಂಶಯ ಮತ್ತು ಶ್ರದ್ಧೆ

ನಾವು ವಿವೇಚಿಸಿದ ಮತಧರ್ಮದ ಪ್ರತಿಧರ್ಮಗಳು ನಮ್ಮ ಆತಂಕಗಳನ್ನು ಹೋಗಲಾಡಿಸುವುದಿಲ್ಲ. ನಮ್ಮನ್ನು ಜನಸಮೂಹದಲ್ಲಿಯೋ, ಒಂದು ರಾಜಕೀಯ ಪಕ್ಷದಲ್ಲಿಯೋ, ಪಾಪನಿವೇದನೆ ಮಾಡಿಕೊಳ್ಳುವ ಚರ್ಚಿನಲ್ಲಿಯೋ ನೂಕಿ ನಮ್ಮ ಭಯ ಭೀತಿಗಳು ಅಡಗುವಂತೆ ಮಾಡಿ ಧೈರ್ಯ ತುಂಬಿಸುತ್ತವೆ. ಇವುಗಳಿಂದ ತಪ್ಪಿಸಿಕೊಳ್ಳಲು ಒಂದೇಮಾರ್ಗವೆಂದರೆ, ಸಂಶಯ ಸಂಕಟಗಳೊಡನೆ ಜಾಗ್ರತ ಮತ್ತು ಸಂತತ ಹೋರಾಟ. ಪೂರ್ಣವಾಗಿ ಸ್ವತಂತ್ರವಾಗಿ ಸತ್ಯವನ್ನು ಸಂಧಿಸುವುದು ಜನಸಂದಣಿಯಲ್ಲಿ ಸಾಧ್ಯವಿಲ್ಲ. ಅಲ್ಲಿ ನಾವು ಅಸ್ವತಂತ್ರರಾಗುತ್ತೇವೆ. ತನ್ನ ಅಸಮರ್ಪಕತೆಯ ವೇದನೆಯನ್ನನುಭವಿಸುತ್ತಿರುವ ಯುಗದಲ್ಲಿ ನಾವಿದ್ದೇವೆ. ಈ ನಷ್ಟ ತುಂಬಿಕೊಳ್ಳಲು ಹುಚ್ಚುಹುಚ್ಚಾದ ಉಪಾಯಗಳನ್ನು ಹುಡುಕುತ್ತಿದ್ದೇವೆ. ನಮ್ಮ ಒಳಹೊಕ್ಕು ನೋಡಿದಾಗ ನಮಗೆ ಉಂಟಾಗುವ ವೇದನೆ ನಮ್ಮ ನರಗಳನ್ನು ಶಿಥಿಲಗೊಳಿಸುತ್ತದೆ. ಅಂತಹ ಸಮಯದಲ್ಲಿ ನಮ್ಮನ್ನು ಸ್ತಿಮಿತಗೊಳಿಸಲು ಏನು ಸಿಕ್ಕಿದರೂ ಅದನ್ನು ಸ್ವಾಗತಿಸಲು ಸಿದ್ಧರಾಗುತ್ತೇವೆ. ನಮ್ಮ ಮನಸ್ಸನ್ನು ನೆಮ್ಮದಿಗೊಳಿಸಲು ಯಾರು ಯಾವ ಭ್ರಾಂತಿಯನ್ನು ನಮ್ಮ ಮುಂದಿಟ್ಟರೂ ಅದರ ಆಸರೆ ಪಡೆಯುತ್ತೇವೆ. ಯಾವ ದೇವತೆಗಾದರೂ ನಮಸ್ಕಾರ ಮಾಡಲು ಕೈ ಎತ್ತುತ್ತೇವೆ. ಈ ಮತಭ್ರಷ್ಟತೆ ಋಜುಮಾರ್ಗವನ್ನು ಎಷ್ಟು ಅತಿಕ್ರಮಿಸಿದ್ದರೂ ಸಹ ಅದನ್ನು ಹಿಂಬಾಲಿಸುವವರು ಇದ್ದೇ ಇರುತ್ತಾರೆ. ಎಷ್ಟು ವಿವೇಕಶೂನ್ಯವಾದ ಕಾರಣಕ್ಕಾದರೂ ಅದಕ್ಕಾಗಿ ಮಡಿಯುವ ಜನ ಸಿಕ್ಕದೇ ಇರುವುದಿಲ್ಲ. ನಮ್ಮ ಕಾಲದ ವಿಶಿಷ್ಟ ಲಕ್ಷಣ ಅದರ ನಾಸ್ತಿಕ್ಯವಲ್ಲ, ಅದರ ನಂಬಿಕೆಗಳು. ಅದು ಅಪ್ಪಿಕೊಳ್ಳಲು ಸಿದ್ಧವಾಗಿರುವ ಚಿತ್ರವಿಚಿತ್ರ ಮೂಢನಂಬಿಕೆಗಳು. ನಾಸ್ತಿಕರು ಬಹಳ, ಆದರೆ ಯಾವುದರಲ್ಲೂ ನಂಬಿಕೆಯಿಲ್ಲದವರು ಕಡಮೆ. ಶ್ರದ್ಧೆಯಯುಗ ನಮ್ಮೊಡನೆ ಇದ್ದೇ ಇರುತ್ತದೆ. ನಮ್ಮ ಶ್ರದ್ಧೆಯ ವಿಷಯ ಮಾತ್ರ ಬದಲಾಗುತ್ತಿರುತ್ತದೆ. ಒಂದು ಮತವನ್ನು ನಾವು ಬಿಡುವುದು ಮತ್ತೊಂದು ಮತವನ್ನು ಅಪ್ಪುವುದಕ್ಕಾಗಿ. ಈ ಹೊಸ ಮತಗಳ ಆಧಾರ ಸತ್ಯಾನ್ವೇಷಣೆಗಿಂತ ಅದಕ್ಕೂ ಆಳವಾದ ವಸ್ತುವಿನ ಅನ್ವೇಷಣೆ. ಯಾವುದನ್ನಾದರೂ ನಂಬಬೇಕಾದ ಇಚ್ಛೆ. ಇದರ ಅಗತ್ಯವನ್ನು

ತಪ್ಪಿಸಿಕೊಳ್ಳಲು ನಾವೆಷ್ಟು ಪ್ರಯತ್ನಪಟ್ಟರೂ ನಮ್ಮ ಆತ್ಮಕ್ಕೆ ಒಂದು ನಿಶ್ಚಿತ ನೆಲೆ ಬೇಕೆನಿಸುತ್ತದೆ. ಜೀವನಕ್ಕೆ ಅರ್ಥಕೊಡುವ, ಅದಕ್ಕೊಂದು ಅರಿವಿಗೆ ನಿಲುಕುವ ಗುರಿಬೇಕು. ಈ ಹೊಸನಿಷ್ಠೆಗಳು ಕ್ಷುದ್ರ ಮತ್ತು ಸಂಕುಚಿತ. ಇವು ಹೊಸ ಭ್ರಾಂತಿಗಳನ್ನು ಸೃಷ್ಟಿಸುತ್ತವೆ. ಈ ಭ್ರಾಂತಿಗಳು ಹೊಸ ಅಪಾಯಗಳನ್ನು ತರುತ್ತವೆ; ತಿರಸ್ಕಾರಭಾವದ ಹೊಸ ಬೇಸರಗಳ ಅಲೆಗಳು ನಮ್ಮ ಮೇಲೆ ಹಾಯಲು ಕಾರಣವಾಗುತ್ತವೆ.

ಮಾನವನು ಸಂಕಟದ ಪರಮಾವಧಿಯನ್ನು ಮುಟ್ಟಿದಾಗ ದೇವರಿಗೆ ಬಹು ಸಮೀಪವಾಗುತ್ತಾನೆ. ಆಗ ಮಾತ್ರ, ಅತ್ಯಂತ ಖೇದಸೂಚಿಸುವ ಈ ಹೃದಯದ ಉದ್ಗಾರವನ್ನು ಕೇಳುತ್ತೇವೆ. "ನಮ್ಮ ಸ್ವಾಮಿಯನ್ನು ಎಲ್ಲಿಗೋ ಒಯ್ದಿದ್ದಾರೆ, ಅವನನ್ನು ಎಲ್ಲಿ ಮಲಗಿಸಿದ್ದಾರೊ ನಾವರಿಯೆವು."

ನಮಗೊಂದು ದರ್ಶನಬೇಕು, ದಿಕ್ಕುದೆಸೆಯೊಂದು ಬೇಕು, ಭರವಸೆ ಬೇಕು. ಇಲ್ಲವಾದರೆ ನಮ್ಮ ಇಂದಿನ ಅನಿಶ್ಚಿತ ಸ್ಥಿತಿ ನಮ್ಮನ್ನೂ ಶೂನ್ಯದ ಕಡೆಗೆ ಒಯ್ಯದಿರುವುದಿಲ್ಲ. ನಮ್ಮ ಮನಸ್ಸುಗಳು ಕಲಕಿಹೋಗಿವೆ, ಹೊಸ ಬೆಳಕನ್ನು ಎದಿರುನೋಡುತ್ತಿದ್ದೇವೆ. ನಾವು ಹೊಸಜೀವನದ ಹೊಸ್ತಿಲಿನಮೇಲೆ ನಿಂತಿದ್ದೇವೆಂದು ಇವು ಸೂಚಿಸುತ್ತವೆ. ನಾವೊಂದು ಧಾರ್ಮಿಕ ಸಂದೇಶವನ್ನು ಹುಡುಕುತ್ತಿದ್ದೇವೆ. ಯಾವ ಸಂದೇಶ ವೈಶಿಷ್ಟ್ಯವಾದದ್ದೋ ಸರ್ವತ್ರ ಸಮಂಜಸವೋ, ತೃಪ್ತಿಕರವೋ, ಪ್ರಮಾಣಪೂರ್ವಕವೋ, ಸತ್ಯದ ನವ್ಯಪ್ರಜ್ಞೆಯೊಂದನ್ನು ನೀಡುವುದೋ, ಜಾಗ್ರತವಾದ ಸಾಮಾಜಿಕ ಹಿತದ ಅರಿವನ್ನು ಉಂಟುಮಾಡುವುದೋ ಅಂತಹ ಸಂದೇಶ ನಮಗೆ ಬೇಕು. ಅವು ಇಂದಿನ ಧಾರ್ಮಿಕ ಪರಿಸ್ಥಿತಿಯ ಪ್ರಧಾನ ಲಕ್ಷಣಗಳು. ನಂಬುವುದು ಕಷ್ಟವಾಗಬಹುದು ಆದರೆ ನಂಬಿಕೆಯ ಅವಶ್ಯಕತೆಯಂತೂ ಅನಿವಾರ್ಯ. ಪೇಚಾಡುತ್ತಿರುವ ಹಾಗೂ ಉತ್ಕಾಂಕ್ಷೆಯಿಂದ ಕೂಡಿರುವ ಮಾನವಕುಲಕ್ಕೆ ಯುಕ್ತಿಯುಕ್ತವಾದ ಧರ್ಮ ಒಂದನ್ನು ನೀಡಬೇಕು. ಇದು ವಿಚಾರಕ್ಕೆಡೆ ಕೊಡದ, ಮಾನವನ ಇಚ್ಛಾಸ್ವಾತಂತ್ರ್ಯವನ್ನು ಅಲ್ಲಗಳೆಯುವ ನಂಬಿಕೆ ಆಗಬಾರದು. ಬರೀ ಅನಿಶ್ಚಿತ ನಕಾರಾತ್ಮಕವಾಗಬಾರದು. ಇದೊಂದು ನವೀನ ದಿವ್ಯದರ್ಶನವಾಗಿರಬೇಕು. ಇಂದು ಇದರ ಹೆಸರಿನಲ್ಲಿ ಜೀವನದ ಮೇಲ್ಮೆಯನ್ನು ಬಯಸುತ್ತಿರುವ ಮನಸ್ಸಿನಮೇಲೆ ಆಧಿಪತ್ಯ ಸ್ಥಾಪಿಸಲು ಮೇಲಾಟ ನಡೆಸುತ್ತಿರುವ ವಿಚಿತ್ರ ಪಂಥಗಳನ್ನು ಎದುರಿಸಬೇಕು. ಅವುಗಳೊಡನೆ ಹೋರಾಡಬೇಕು.

# ನಾಸ್ತಿಕ ಸತ್ಯದ ಅನ್ವೇಷಣೆ

## ೧. ವೈಜ್ಞಾನಿಕ ಮಾರ್ಗ

ಎಲ್ಲ ಮತಧರ್ಮತತ್ವಜ್ಞರೂ ಈಶ್ವರನ ಅಸ್ತಿತ್ವವನ್ನು ಸಮರ್ಥಿಸಲು ಅನೇಕ ತಾರ್ಕಿಕ ವಾದಗಳನ್ನು ಮುಂದಿಡುತ್ತಾರೆ. ಇವನ್ನು ಉಪನಿಷತ್ತಿನಲ್ಲಿ, ಬೌದ್ಧಧರ್ಮದಲ್ಲಿ, ಪ್ಲೇಟೋವಿನಲ್ಲಿ, ಅರಿಸ್ಟಾಟಲಿನಲ್ಲಿ ಕಾಣುತ್ತೇವೆ. ಸಂತ ಥಾಮಸ್ ಏಕ್ವಿನಾಸನ ಪ್ರಮಾಣಪಂಚಕ ಪ್ರಸಿದ್ಧವಾಗಿದೆ: ಕ್ಯಾಂಟ್ ಮಾನವ ಧರ್ಮಾನುಭವದ ಆಧಾರದಮೇಲೆ ದೇವರ ಅಸ್ತಿತ್ವವನ್ನು ಸ್ಥಾಪಿಸಲು ಪ್ರಯತ್ನಿಸುತ್ತಾನೆ. ಹೆಗೆಲ್ ಮಾನವನ ಜ್ಞಾನಶಕ್ತಿಯ ಆಧಾರದ ಮೇಲೆ ಅದನ್ನು ಸ್ಥಾಪಿಸುತ್ತಾನೆ. ಮತಧರ್ಮ ನಮ್ಮ ಸತ್ಯದ ಸಹಜ ಬಯಕೆಯನ್ನು ಪೂರ್ಣಗೊಳಿಸಬೇಕು. ದೇವರು ಸತ್ಯಸ್ವರೂಪನು. ದೇವರು ಸತ್ಯ ಅನ್ನುವುದರಬದಲು ಸತ್ಯವೇ ದೇವರೆಂದು ಗಾಂಧಿ ಹೇಳುತ್ತಿದ್ದರು. ಈ ವಾಕ್ಯವು ತಪೋಬ್ರಹ್ಮ, ಅನ್ನುವ ಉಪನಿಷದ್ವಾಕ್ಯದ ಭಾಷ್ಯ. ಪ್ರಾಮಾಣಿಕವಾದ ಭಕ್ತಿಯುಕ್ತ ವಿಚಾರವೇ ದೈವಿಕವೆಂದು ಇದರ ಅರ್ಥ. ಸಾಕ್ಷ್ಯದ ಮೇಲೆ ನಿಂತ ಬುದ್ಧಿಯೊಂದೇ ನಮ್ಮನ್ನು ಸತ್ಯದಕಡೆಗೆ ಒಯ್ಯಬಲ್ಲದೆಂದು ಬುದ್ಧ ಹೇಳುತ್ತಾನೆ. ಪುರಾತನವಾದುದೆಂಬ ಕಾರಣದಿಂದಲೇ ಅಥವಾ ಅದರ ಕರ್ತೃವಿನಲ್ಲಿ ಗೌರವದ ಕಾರಣದಿಂದಲೇ ಒಂದು ಪವಿತ್ರಗ್ರಂಥವನ್ನು ನಂಬಬಾರದೆಂದು ಬುದ್ಧ ಉಪದೇಶಮಾಡುತ್ತಾನೆ. ಪ್ರತಿಯೊಬ್ಬನೂ ತಾನೇ ಹುಡುಕಲು ತೊಡಗಬೇಕು, ಆಲೋಚನೆಮಾಡಬೇಕು, ಮತ್ತು ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಸತ್ಯದ ಸತ್ತ್ವ ನಮ್ಮಲ್ಲಿಯೇ ಇರುವುದೆಂದೂ ಅದು ನಮ್ಮನ್ನು ಮುಕ್ತಿಗೊಳಿಸುವದೆಂದೂ ಏಸು ಹೇಳುತ್ತಾನೆ. ದೇವರನ್ನು ನಿಮ್ಮ ತನುಮನಗಳಿಂದೆಲ್ಲ ಪ್ರೀತಿಸಿರಿ ಎಂದು ಏಸು ಹೇಳಿದಾಗ ಅದರ ಅರ್ಥ ದೇವರನ್ನೂ ವ್ಯಕ್ತಿತ್ವದ ಪ್ರಧಾನ ಅಂಶವಾದ ನಮ್ಮ ಬುದ್ಧಿಯ ಮೂಲಕವಾಗಿ ಪ್ರೀತಿಸಬೇಕೆಂದು ಅರ್ಥ. ನಮ್ಮಲ್ಲಿ ಅಪೇಕ್ಷಣೀಯವಾದದ್ದು ಜ್ಞಾನಪೂರ್ವಕವಾದ ಭಕ್ತಿ, ಬರಿಯ ಭಾವಾವೇಶದ ಭಕ್ತಿಯಲ್ಲ.

ಎಲ್ಲಿ ಈಶ್ವರನ ಸಾನ್ನಿಧ್ಯ ಇದೆಯೋ ಅಲ್ಲಿ ಸ್ವಾತಂತ್ರ್ಯವಿದೆ; ವಿಚಾರ ಸ್ವಾತಂತ್ರ್ಯ ಮತ್ತು ಕ್ರಿಯಾಸ್ವಾತಂತ್ರ್ಯ. ಯಾವಸಂದರ್ಭದಲ್ಲಿಯಾದರೂ

ಅಸತ್ಯಕ್ಕಿಂತ ಸತ್ಯವೇ ಹೆಚ್ಚು ಬೆಲೆಯುಳ್ಳದ್ದು. ಒಂದುವೇಳೆ ಸತ್ಯ ನಮಗೆ ವಿಚಿತ್ರವಾದ ರೂಪದಲ್ಲಿ ಕಂಡರೂ, ನಮಗೆ ಕಷ್ಟ ತರುವಂತಹುದಾದರೂ, ಹಿಂದೆ ನಂಬಿಕೊಂಡಿದ್ದೆಲ್ಲವನ್ನೂ ತ್ಯಾಗಮಾಡಬೇಕಾಗಿ ಬಂದರೂ, ಅದರ ಅಂತಿಮ ಪರಿಣಾಮ ಮಾನವನ ಚೇತನಕ್ಕೂ ಲೋಕ ಕಲ್ಯಾಣಕ್ಕೂ ಅಹಿತವಾಗಲಾರದು. ಮಾನವನ ಜೀವನಯಾತ್ರೆಯ ಕಥೆ ಸಂತತ ಸತ್ಯಾನ್ವೇಷಣೆ. ಹುಡುಕುವುದು, ಕಂಡುಕೊಳ್ಳುವುದು, ಮತ್ತೆ ಹುಡುಕಲು ಹೊರಡುವುದು, ಹೀಗೆಯೇ ನಾವು ಬೆಳೆಯುವುದು; ನಮ್ಮ ಅನುಭವವನ್ನು ಹೆಚ್ಚಿಸಿಕೊಳ್ಳುವುದು. ನಾವು ವೈಜ್ಞಾನಿಕರಾಗಿರಲಿ ಧಾರ್ಮಿಕರಾಗಿರಲಿ ಸತ್ಯವನ್ನು ಹುಡುಕುವುದೇ ನಮ್ಮವಿಧಿ. ವಿಜ್ಞಾನ ಬರಿಯ ಭಾವನೆಯಲ್ಲ. ಮತಧರ್ಮ ವಿಚಾರಕ್ಕೆ ಎಡೆಗೊಡದ ಬರಿಯ ನಂಬಿಕೆಯಲ್ಲ. ವಿಜ್ಞಾನ ನಮಗೆ ನೀಡುವ ಸತ್ಯದಿಂದ ಮತಧರ್ಮ ಗಂಭೀರವಾಗುತ್ತದೆ, ಆಳವಾಗುತ್ತದೆ.

ವಿಜ್ಞಾನದ ಕೆಲಸ ಜಿಜ್ಞಾಸೆಗೆ ಪ್ರೇರಣೆಕೊಡುವುದು. ಇದನ್ನು ಬಿಟ್ಟು ತನ್ನ ಅಧಿಕಾರದ ನಿರ್ಬಂಧಕ್ಕೆ ಮನಸ್ಸನ್ನು ಒಳಪಡಿಸಿದರೆ, ಸತ್ಯಕ್ಕೆ ಅಪಚಾರ ಎಸಗಿದಂತೆ. ತನ್ನ ಆಶ್ರಿತರನ್ನು ಸ್ವತಂತ್ರ ವಿಚಾರದ ಕರ್ತವ್ಯದಿಂದ ಬಿಡಿಸುವುದಾದರೆ ವಿಜ್ಞಾನ ಒಂದು ಮಿಥ್ಯಾಧರ್ಮವಾಗುತ್ತದೆ. ಹತ್ತೊಂಬತ್ತನೆ ಶತಮಾನದ ಮಧ್ಯಭಾಗದ ಹೊತ್ತಿಗೆ ವಿಜ್ಞಾನವು ಮತಧರ್ಮದಂತೆಯೇ ಗರ್ವಪೂರ್ವಕ ಸ್ವಮತವಾದದಲ್ಲಿ ನಿರತವಾಗಿಬಿಟ್ಟಿತು. ಜಗತ್ತು ಮತ್ತು ಅದರಲ್ಲಿ ಇರುವುದೆಲ್ಲವೂ ಒಂದು ಪರಿಷ್ಕಾರವಾದ ಯಂತ್ರದ ಭಾಗಗಳೆಂದೂ ಇದನ್ನೆಲ್ಲ ಕೊನೆಗೆ ದುರ್ಭೇದ್ಯವಾದ ಪರಮಾಣುಗಳಿಗೆ ಪರಿವರ್ತನೆಗೊಳಿಸಬಹುದೆಂದೂ ವಿಜ್ಞಾನಿಗಳು ನಂಬಿದರು. ಈರೀತಿಯ ಯಾಂತ್ರಿಕ ವಿವರಣೆಯಲ್ಲಿ ಮಾನಸಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳಿಗೆ ಸ್ಥಾನವಿಲ್ಲವಾಯಿತು.

ತತ್ವಜ್ಞಾನದಂತೆ, ಮತಧರ್ಮವೂ ಸಹ ನಮ್ಮ ಸಮಗ್ರ ಅನುಭವಗಳಿಗೆ ಅರ್ಥಪೂರ್ಣ ವಿವರಣೆ ಕೊಡುವ ಪ್ರಯತ್ನ. ಅನುಭವಗಳು ನಾನಾವಿಧ. ಅವು ಪ್ರಾಪಂಚಿಕ ವಸ್ತುಗಳನ್ನು ಕುರಿತದ್ದು. ನಿಸರ್ಗಶಾಸ್ತ್ರಗಳ ವಿಷಯವಾದ ನಿಸರ್ಗ; ಮಾನವ ವ್ಯಕ್ತಿಗಳ, ಅವರ ಭಾವನೆಗಳ, ಭಾವಗಳ,

ಇಚ್ಛೆಗಳ, ಸಂಕಲ್ಪಗಳ, ಅಧ್ಯಯನಮಾಡುವ ಸಾಮಾಜಿಕ ಶಾಸ್ತ್ರ, ಮನೋವಿಜ್ಞಾನ, ಮತ್ತು ಇತಿಹಾಸ; ಮೌಲ್ಯಗಳ ಅಧ್ಯಯನ ಮಾಡುವ ಸಾಹಿತ್ಯ, ತತ್ವಜ್ಞಾನ, ಮತ್ತು ಮತಧರ್ಮಗಳು. ಈ ವಿವಿಧ ರೀತಿಯ ಅನುಭವಗಳನ್ನು ಒಂದುಗೂಡಿಸಿ ಅದರ ಅರ್ಥವನ್ನು ವಿವರಿಸಿ ನಮ್ಮ ಮಾರ್ಗದರ್ಶನಕ್ಕೆ ಸಮಂಜಸವಾದ ಆದರ್ಶವನ್ನು ರಚಿಸಿಕೊಳ್ಳಬೇಕಾಗಿದೆ. ನಿಸರ್ಗ, ಆತ್ಮ, ಈಶ್ವರ ಇವುಗಳನ್ನು ಕುರಿತ ನಮ್ಮ ಭಾವನೆಗಳು ಅನುಭವದ ಆಧಾರವನ್ನು ಪಡೆಯದಿದ್ದರೆ ಕುಸಿದು ಬೀಳುವುವು. ಅನುಭವದ ಅರ್ಥವನ್ನು ವಿವರಿಸಲು ತರ್ಕದ ಪದ್ಧತಿಗಳನ್ನು ಅವಲಂಬಿಸುತ್ತೇವೆ. ಸತ್ಯಸಿದ್ಧಿಗೆ ಅದೊಂದೇ ಮಾರ್ಗ. ಒಂದು ಸಿದ್ಧಾಂತ ಮತಧರ್ಮಕ್ಕೆ ಸತ್ಯವಾಗಿದ್ದು ತರ್ಕಕ್ಕೆ ವಿರೋಧವಾಗಿರಲು ಸಾಧ್ಯವಿಲ್ಲ. ಥಾಮಿಸ್ಟ್ ಸಿದ್ಧಾಂತದ ಪ್ರಕಾರ, ಸತ್ಯ ಅನ್ನುವುದು ಒಂದೇ ಪರಸ್ಪರ ಅಸಂಗತವಾಗಿ ತೋರುವ ಅಭಿಪ್ರಾಯಗಳನ್ನೂ ಸಮನ್ವಯಗೊಳಿಸಲು ಸಾಧ್ಯ. ಜ್ಞಾನ ಪಿಪಾಸೆಯನ್ನೂ ಒಳಗೊಂಡ ಪರಮಾರ್ಥ ಪಿಪಾಸೆಯನ್ನು ತಣಿಸಲೇಬೇಕು. ಜಗತ್ತಿನ ನಿಜಸ್ವರೂಪವನ್ನು ಅರಿಯಲು ಅಸಮರ್ಥರಾಗಿದ್ದಾಗ, ನಮ್ಮ ಅರಿವಿಗೆ ಮತ್ತು ಹತೋಟಿಗೆ ಮೀರಿದ ನಿಸರ್ಗಶಕ್ತಿಗಳ ನಿಗ್ರಹಾನುಗ್ರಹಗಳಿಗೆ ಈಡಾಗಿದ್ದಾಗ ಈ ಜಗತ್ತನ್ನು ನಮ್ಮ ಕಲ್ಪನೆಯ ಸುರಾಸುರ ದೇವದೇವತೆಗಳಿಂದ ತುಂಬಿದೆವು. ಅವುಗಳನ್ನು ತಣಿಸಿ ನಮ್ಮ ಪರವಾಗಿ ಅವನ್ನು ಒಲಿಸಿಕೊಳ್ಳಲು ಪ್ರಯತ್ನಪಟ್ಟೆವು. ನಿಸರ್ಗದ ಬಗೆಗೆ ನಮ್ಮ ತಿಳಿವಳಿಕೆ ಹೆಚ್ಚುತ್ತಾ ಹೋದಂತೆ ವಿಜ್ಞಾನದಲ್ಲಿ ಗಳಿಸಿದ ನಮ್ಮ ಸಿದ್ಧಿಯಿಂದ ಹೆಮ್ಮೆಗೊಂಡೆವು. ವಿಜ್ಞಾನ ಎಲ್ಲ ಘಟನೆಗಳನ್ನೂ ವಿವರಿಸಬಲ್ಲದೆಂದೂ ಸ್ಪಷ್ಟಗೊಳಿಸಬಲ್ಲದೆಂದೂ ನಂಬಿದೆವು. "ನೀಹಾರಿಕೆಯ ಪರಮಾಣುಗಳಿಂದ ಹಿಡಿದು ವಿಜ್ಞಾನದ ಪ್ರಗತಿಗಾಗಿ ಏರ್ಪಟ್ಟ ಬ್ರಿಟಿಷ್ ಸಂಸ್ಥೆಯ ನಡೆವಳಿಕೆಗಳವರೆಗೆ ಎಲ್ಲವನ್ನೂ ನಿಸರ್ಗದ ಅಪರಿಹಾರ್ಯ ನಿಯತ ವಿಕಾಸಕ್ಕೆ ಒಳಪಡಿಸಬಹುದಾಗಿದೆ" ಎಂಬ ನಂಬಿಕೆ ಬಂತು. ಈ ಅರಿವಿನ ಮೊದಲ ಘಟ್ಟದಲ್ಲಿ, ಯಥಾರ್ಥ ಸತ್ತೆಯನ್ನು (Reality) ಅದು ನಮಗೆ ದತ್ತವಾಗಿರುವದೆಂದೂ ದುರತಿಕ್ರಮವಾದುದೆಂದೂ ಭಾವಿಸಿದೆವು. ಆದ್ದರಿಂದ ವಾಸ್ತವಸ್ಥಿತಿಯ ನಿರ್ಬಂಧಗಳಿಗೆ

ಶರಣು ಹೋಗುವುದೇ ಮಾನವನ ಕರ್ತವ್ಯವಾಯಿತು. ಎರಡನೆಯ ಘಟ್ಟದಲ್ಲಿ, ಈ ವಾಸ್ತವ ಸ್ಥಿತಿಯನ್ನು ತನ್ನ ಇಚ್ಛೆಯಂತೆ ರೂಪುಗೊಳಿಸಿಕೊಂಡು ತನ್ನ ಅನುಕೂಲಕ್ಕಾಗಿ ಅದನ್ನು ಒಗ್ಗಿಸಿಕೊಳ್ಳುವ ಪ್ರಯತ್ನವಾಯಿತು. ಮೊದಲನೆಯ ಘಟ್ಟದಲ್ಲಿ, ಮಾನವ ನಿಸರ್ಗಕ್ಕೆ ಹೊಂದಿಕೊಳ್ಳಲು ತನ್ನನ್ನು ನಿಯಂತ್ರಣಮಾಡಿಕೊಂಡ. ಎರಡನೆಯ ಘಟ್ಟದಲ್ಲಿ ನಿಸರ್ಗವನ್ನು ತನಗಾಗಿ ನಿಯಂತ್ರಣಗೊಳಿಸಲು ಯತ್ನಮಾಡಿದ. ಮೊದಲನೆಯದರಲ್ಲಿ ವಿವೇಕದ ಮತ್ತು ಸಂಯಮದ ಅವಶ್ಯಕತೆ ಪ್ರಧಾನವಾಗಿ ಮೂಡಿತು; ಎರಡನೆಯದರಲ್ಲಿ, ಮಾನವನು ತನ್ನ ಸನ್ನಿವೇಶದ ಮೇಲೆ ಸ್ವಾಮಿತ್ವವನ್ನು ಸಂಪಾದಿಸಿಕೊಳ್ಳಲು ಬೇಕಾದ ಜ್ಞಾನದ ಅವಶ್ಯಕತೆ ಮೂಡಿತು.

ಜೀವನದ ಮುಖ್ಯ ಲಕ್ಷಣ ಅದರ ಕ್ಷಣ ಭಂಗುರತ್ವ, ನಶ್ವರತೆ. ಜಗತ್ತಿನಲ್ಲಿರುವುದೆಲ್ಲವೂ ವಿನಾಶ ಹೊಂದುತ್ತದೆ. ಬರೆದ ಮಾತು, ಕೊರೆದ ಕಲ್ಲು, ಲಿಖಿತಚಿತ್ರ, ಸಾಧಿಸಿದ ಸಾಹಸಕೃತಿ ಇವೆಲ್ಲವೂ ನಶ್ವರವೇ. ಹಾಗೆಯೇ ನಮ್ಮ ಆಲೋಚನೆಗಳು, ಕಾರ್ಯಗಳು, ನಮ್ಮ ಪ್ರತಿಷ್ಠೆಯ ಕೃತಿಗಳು ನಮ್ಮ ಆರ್ಥಿಕ ವ್ಯವಸ್ಥೆಗಳು, ರಾಜಕೀಯ ಸಂಸ್ಥೆಗಳು. ನಮ್ಮ ಹಿರಿದಾದ ನಾಗರಿಕತೆಗಳು ಕಾಲದ ನಿಯಮಕ್ಕೆ ತುತ್ತಾಗಿ ಐತಿಹಾಸಿಕ ಅವಶೇಷಗಳಾಗಿವೆ. ಸೂರ್ಯನೂ ಮುಪ್ಪಾಗಿ ತನ್ನ ಸ್ವರೂಪವನ್ನು ಕಳೆದುಕೊಂಡಾಗ ನಾವು ವಾಸಿಸುವ ಈ ಭೂಮಿ ಮಾನವನ ವಾಸಸ್ಥಾನವಾಗಿ ಉಳಿಯಲು ಸಾಧ್ಯವಿಲ್ಲದಾಗುತ್ತದೆ. ಎಲ್ಲವೂ ಈ ಸಂಸಾರದ ಸಂಸರಣದಲ್ಲಿ ಸಿಕ್ಕಿದೆ, ಕಾಲಗತಿಗೆ ತುತ್ತಾಗಿದೆ. ಇರವು ಮತ್ತು ಮಾರ್ಪಾಡು ಪರ್ಯಾಯ ಶಬ್ದಗಳು, ಪರಸ್ಪರ ಪರಿವರ್ತನೀಯ.

ಅನೇಕ ಪ್ರಕಾರದ ಭಾರತೀಯ ವಿಚಾರ ಪರಂಪರೆಗಳಲ್ಲಿ ಕಾಲತತ್ವದ ಚಿಹ್ನೆ (ಪುನರಪಿಜನನಂ ಪುನರಪಿಮರಣಂ) ಜಗತ್ತಿನ ಸ್ವರೂಪ ಕಾಲಚಕ್ರ, ಸೃಷ್ಟಿಲಯಗಳ ಚಕ್ರ. ಈ ಎಲ್ಲವನ್ನೂ ಕಬಳಿಸುವ ಕಾಲ, ಈ ಸಂಸಾರ ಇವಿಷ್ಟೇ ಸತ್ಯವೇ ಅಥವಾ ಇದನ್ನು ಮೀರಿದುದು ಏನಾದರೂ ಇದೆಯೇ ಎಂಬುದು ತತ್ವಜ್ಞಾನದ ಮುಂದಿರುವ ಪ್ರಶ್ನೆ. ಈ ಜಗತ್ತು ತನ್ನಿಂದಲೇ ಉಳಿದು, ತನ್ನಿಂದಲೇ ಧಾರಣೆಗೊಂಡು, ತನ್ನಲ್ಲಿಯೇ ಪ್ರತಿಷ್ಠಿತವಾದ ಸಂತತ ಸಂಸರಣದ ಘಟನಾವಳಿಯೇ ಅಥವಾ ತನಗೆ ಮೀರಿದ, ತನಗೆ

ಆಧಾರವಾದ, ತನ್ನ ಬೆಂಬಲವಾದ, ತನಗೆ ಚೈತನ್ಯವಿತ್ತ, ತನ್ನನ್ನು ಒಟ್ಟಾಗಿ ಹಿಡಿದಿರುವ ಅತೀತ ತತ್ವ ಒಂದಿದೆಯೇ?

ಈ ಪ್ರಶ್ನೆಯನ್ನು ನಾವು ಬಿಡಿಸಲು ಪ್ರಯತ್ನಿಸುವ ಮೊದಲು ಈ ಸಂಸಾರದ ಪ್ರಧಾನಲಕ್ಷಣಗಳನ್ನು ಗಮನಿಸಬೇಕಾದುದು ಅಗತ್ಯ. ಎಲ್ಲಕ್ಕಿಂತ ಹೆಚ್ಚು ಸ್ಪಷ್ಟವಾದ ಲಕ್ಷಣ ಅದರ ಸುವ್ಯವಸ್ಥೆ. ವಿಶ್ವದ ರೀತಿ ನಮಗೆ ಅರ್ಥವಾಗದ ಅಸ್ತವ್ಯಸ್ತ ಸ್ಥಿತಿ ಅಲ್ಲ. ಅದು ಕೆಲವು ನಿಶ್ಚಿತವಾದ ನಿಯಮಗಳಿಗೆ ಒಳಪಟ್ಟಿದೆ. ನಾವು ಯೋಜನೆ ನಿರ್ಮಿಸಬಹುದು, ಅದರ ಭವಿಷ್ಯವನ್ನು ನುಡಿಯಲು ಸಮರ್ಥರಾಗಬಹುದು, ಅನುಭವದಿಂದ ಪಾಠ ಕಲಿಯಬಹುದು, ನಿಷ್ಕೃಷ್ಟ ಜ್ಞಾನವನ್ನು ಪಡೆದು ಮುಂದಿನ ಗುರಿಗಳನ್ನು ಮುಟ್ಟಲು ಯತ್ನಿಸಲೂ ಬಹುದು. ಸ್ಥಿರವಾದ ನಿಸರ್ಗ ನಿಯಮಗಳಲ್ಲಿ ನಮ್ಮ ಹಸ್ತಕ್ಷೇಪವಿಲ್ಲ ಆದುದರಿಂದ ಜಗತ್ತನ್ನು ಆಳುವ ನಿಯಮಗಳನ್ನು ಅರ್ಥಮಾಡಿಕೊಳ್ಳಲು ನಮಗೆ ಸಾಧ್ಯವಾಗುತ್ತದೆ. ವಿಶ್ವವು ನಿಯಮರಹಿತವಾಗಿದ್ದರೆ,ಸೂರ್ಯೋದಯವಾಗಲೀ ಬೀಜದ ಪ್ರಾದುರ್ಭಾವವಾಗಲೀ ಅಸ್ತವ್ಯಸ್ತ ರೀತಿಯಲ್ಲಿ ಸಂಭವಿಸುವುದಾದರೆ, ಈ ಜಗತ್ತು ಮುಂದುವರಿಯಲಾರದು. ನಮ್ಮ ಬದುಕು ಒಂದು ಭೀಕರ ಸ್ವಪ್ನದಂತಾಗುತ್ತದೆ. ಜಗತ್ತು, ಅರ್ಥ ಶೂನ್ಯವಲ್ಲ. ಒಂದು ನಿಯಮ ಇದೆ; ವಸ್ತುಗಳ ಚಲನವಲನೆಗಳಲ್ಲಿ ಒಂದು ರೀತಿ ನೀತಿ ಇದೆ. ನ್ಯೂಟನ್ ಮತ್ತು ಕಾಂಟ್‌ರಂತಹ ಮಹಿಮಾನ್ವಿತ ಚಿಂತಕರು ಈ ವಿಶ್ವದ ಋತನಿಯಮದ ಭವ್ಯತೆಗೆ ಮುಗ್ಧರಾದರು.

ನಮಗೆ ಆಗಾಗ ಸಂಭವಿಸುವ ನೈಸರ್ಗಿಕ ಉತ್ಪಾತಗಳೂ ಒಂದು ವ್ಯವಸ್ಥೆಯ ಪರಿಣಾಮವೇ ಎಂಬುದು ಇದರಿಂದ ಸಿದ್ಧವಾಗುತ್ತದೆ. ಈ ನಿಸರ್ಗನಿಯಮಗಳ ಫಲವಾಗಿ ಉಂಟಾಗುವ ಪರಿಣಾಮಗಳನ್ನು ತೊಡೆದು ಹಾಕಬಲ್ಲ ಪವಾಡಗಳು ಸಂಭವಿಸಬಹುದಾದರೆ ನಮ್ಮ ಜ್ಞಾನ ಮತ್ತು ಅದರ ಅನುಗುಣವಾದ ಕ್ರಿಯೆ ಅಸಂಭವವಾಗುತ್ತದೆ. ನಿಸರ್ಗಕ್ಕೆ ತನ್ನದೇ ಆದ ಛಂದೋಗತಿಯಿದೆ. ಇದು ಮಾನವನ ಜೀವಿತಕ್ಕೆ ಅತ್ಯಾವಶ್ಯಕ.

ಜಗತ್ತು ಒಂದೇ ವ್ಯವಸ್ಥೆಯ ಬರಿಯ ಪುನರಾವರ್ತನೆ ಅಲ್ಲ; ಭವಿಷ್ಯದ ಕಡೆಗೂ ಮುನ್ನುಗ್ಗುತ್ತದೆ. ವಿಶ್ವದ ಪ್ರಚಲನದಲ್ಲಿ ಕ್ರಮಾನು

ಸಾರವಾಗಿ ಉದ್ಭವಿಸುವ ಇರವಿನ ಸ್ತರಗಳನ್ನು ಕಾಣುತ್ತೇವೆ. ಪ್ರತಿಯೊಂದು ಸ್ತರವೂ ತನಗೆ ವಿಶಿಷ್ಟವಾಧ ನಿಯಮಗಳನ್ನು ಪಡೆದಿದೆ. ಹಿಂದಿನದರಿಂದ ಉದ್ಭವಿಸಿದ್ದರೂ ಸಹ ಅದಕ್ಕಿಂತಲೂ ಮುಂದುವರಿದ ಹೊಸ ಲಕ್ಷಣವನ್ನು ಹೊಂದಿರುತ್ತದೆ. ಪ್ರಾಚೀನ ಉಪನಿಷತ್ತುಗಳಲ್ಲಿ ಒಂದಾದತ್ತೈತ್ತಿರೀಯದಲ್ಲಿ ಬ್ರಹ್ಮಾಂಡ ಐದು ಕೋಶಗಳಿಂದ ಕೂಡಿದೆಯೆಂದು ಉಲ್ಲೇಖಿಸಿದೆ. ಅವು ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ ಕೋಶಗಳು; ಇವು ಗುಣತಃ ವಿವಿಧ. ಒಂದೊಂದು ಕೋಶಕ್ಕೂ ವಿಶಿಷ್ಟವಾದ ಧರ್ಮವಿದೆ. ಮೇಲಿನ ಕೋಶದ ನಿಯಮಗಳು ಕೆಳಗಿನ ಕೋಶಗಳ ನಿಯಮಗಳನ್ನು ತೊಡೆದು ಹಾಕುವುದಿಲ್ಲ, ಅದಕ್ಕೆ ಒಂದು ಹೊಸ ಗುಣವನ್ನು ಸೇರಿಸುತ್ತವೆ. ಹೆಗೆಲ್ (Hegel) ನ ಜಿಜ್ಞಾಸಾತ್ಮಕ ಧ್ಯೇಯವಾದ (Dialectical idealism)ಮತ್ತು ಮಾರ್ಕ್ಸ್‌ನ ಜಿಜ್ಞಾಸಾತ್ಮಕ ಭೌತವಾದ(Dialectical materialism) ಎರಡೂ ಸಿದ್ಧಾಂತಗಳು ಪ್ರಗತಿಯ ಅಂಶವನ್ನು ಒಪ್ಪುತ್ತವೆ. ಇತಿಹಾಸ ಪುರೋಗಾಮಿ ಸ್ವರೂಪಉಳ್ಳದ್ದು. ಅನಂತವಾದ ಪುನರಾವೃತ್ತಿಯಲ್ಲ. ಉಪನಿಷತ್ತಿನ ಪ್ರಕಾರ, ಯಾರ ಮನಸ್ಸು ಮತ್ತು ವಿಜ್ಞಾನಗಳು ಅಧ್ಯಾತ್ಮಿಕ ಆನಂದದ ಕಡೆಗೆ ಒಲಿದಿರುವುದೋ ಅಂಥವರ ಸೃಷ್ಟಿಯೇ ಈ ಜಗತ್ತಿನ ಗುರಿ. ಬ್ರಹ್ಮಲೋಕವೆಂದು ಕರೆಯಲ್ಪಡುವ ಆತ್ಮದ ಸಾಮ್ರಾಜ್ಯ ಸ್ಥಾಪಿತವಾದಾಗ ಮಾತ್ರ ಜಗತ್ತಿನ ಉದ್ದೇಶ ಯಶಸ್ವಿಯಾಗಿ ಪೂರ್ತಿಯಾಗುವುದು. ಈ ದೇವರರಾಜ್ಯದ ವಾಗ್ದಾನವನ್ನು ದೇವಾಂಶ ಸಂಭೂತರಾದ ಬುದ್ಧ, ಜರತುಷ್ಟ್ರ, ಸಾಕ್ರೆಟಿಸ್, ಜೀಸಸ್ ನಮಗೆ ಕೊಟ್ಟಿದ್ದಾರೆ.

ಕ್ರೈಸ್ತ ಸಿದ್ಧಾಂತ ಜಗತ್ತನ್ನು ದೇವರರಾಜ್ಯಕ್ಕೆ ಅಣಿಯಾಗುವ ಸ್ಥಳವೆಂದು ಬಗೆಯುತ್ತದೆ. ಮಾನವ ಲೋಕವು ಪರಿಪೂರ್ಣತೆಯನ್ನು ಮುಟ್ಟಲು ನಮ್ಮನ್ನು ಅಣಿಗೊಳಿಸುವ ಕ್ಷೇತ್ರ ಈ ಜಗತ್ತು.

ಇವೆಲ್ಲವೂ ಇರುವುದು ತಾನೇ ಏಕೆ? ಯಾವದಿರುವುದು ತಾನೇ ಏಕೆ? ಎಲ್ಲವೂ ಅಳಿದರೆ ಉಳಿಯುವುದು ಶುದ್ಧಶೂನ್ಯ. ಈ ಶೂನ್ಯದಲ್ಲಿಯೇ ಅಸ್ತಿತ್ವ ಅಡಗಿರದಿದ್ದರೆ ಯಾವುದು ಇರಲೂ ಸಾಧ್ಯವಿಲ್ಲ. ಜಗತ್ತಿನಲ್ಲಿರುವ

ದೆಲ್ಲವೂ ಅಪೂರ್ಣ ಅಶಾಶ್ವತ. ಅಪೂರ್ಣವಾದದ್ದಾವದೂ ತನ್ನಷ್ಟಕ್ಕೆ ತಾನೇ ಇರಲ್ಲೊಲ್ಲದು. ಅದರ ಅಪೂರ್ಣತೆಯೇ ಇದಕ್ಕೆ ಕಾರಣ. ಉಪನಿಷತ್ತುಗಳು ಅಪೂರ್ಣತೆಯಿಂದ ಪೂರ್ಣತೆಗೆ, ಅಂದರೆ ಎಲ್ಲೆಲ್ಲೂ ಇರುವ, ಕೆಳಗೆ, ಮೇಲೆ, ಆಚೆ, ಎಲ್ಲದರ ಕೇಂದ್ರವಾಗಿ, ಅಣೋರಣೀಯವಾಗಿ, ಅನಂತವಾಗಿ, ಅಪರಿಮಿತವಾಗಿರುವ ಪೂರ್ಣತೆಗೆ ನಮ್ಮನ್ನು ಒಯ್ಯುತ್ತದೆ. ಜಗತ್ತು ಇದೆ ಎಂದರೆ ಸತ್ ಇದೆ ಎಂದೇ ಅರ್ಥ. ಸಂಸಾರ ಅಥವಾ ಜಗತ್ತು ಉಂಟಾಯಿತು ಎಂದ ಮಾತ್ರಕ್ಕೆ ಅದಕ್ಕೊಂದು ಆರಂಭವಿದೆ ಎಂದೂ ಸಂಸರಿಸದ ಒಂದು ವಸ್ತು ಅದರ ಹಿಂದಿರಬೇಕೆಂದೂ ಅರ್ಥವಾಗುತ್ತದೆ. ಇದರ ಮೂಲಾಧಾರ ಸತ್ವಶೂನ್ಯತೆಯ ಅಂಧಕಾರವಲ್ಲ, ಪರಿಪೂರ್ಣಬ್ರಹ್ಮ. ಸತ್ ಅನ್ನುವುದು ಶುದ್ಧ ಸತ್ಯ. ಇದರಲ್ಲಿ ನಕಾರಾತ್ಮಕವಾದುದು ಯಾವದೂ ಇಲ್ಲ. ಇದು ಸ್ವಯಂಪೂರ್ಣ ಸ್ವಾಯತ್ತವಸ್ತು. ಭಾವಾಭಾವಗಳನ್ನು ಮೀರಿದ ಏಕಮೇವಾದ್ವಿತೀಯವಾದ ಸರ್ವವ್ಯಾಪಕವಾದ ವಸ್ತು.

ಅಸತ್ ಇಲ್ಲದೆ ಸತ್ ಇರುವುದು ಸಾಧ್ಯವಿಲ್ಲ. ಜಗತ್ತು ಇರಲೂ ಸಾಧ್ಯವಿಲ್ಲ. ಅವ್ಯಕ್ತವು ವ್ಯಕ್ತ ವಾಗುವುದೂ ಸಾಧ್ಯವಿಲ್ಲ. ಅಸತ್ ಇಲ್ಲದೆ ಸತ್ ನಿರ್ವಿಶೇಷ ವಸ್ತುವಾಗಿಉಳಿದೀತು. ಅದಕ್ಕೆ ವ್ಯಕ್ತತೆಯೂ ಇಲ್ಲ, ಉಚ್ಚಾರವೂ ಇಲ್ಲ. ತನ್ನ ನಿರ್ವಿಶೇಷತೆಯಿಂದ ಅಸತ್ ಸತ್ತನ್ನು ಅವ್ಯಕ್ತತೆಯಿಂದ ವ್ಯಕ್ತತೆಯ ಕಡೆಗೆ ದೂಡುತ್ತದೆ. ಅಸದ್ವಸ್ತುವಿನಿಂದ ಈಶ್ವರಶಕ್ತಿ ಆವಿಷ್ಕರಿಸುತ್ತದೆ. ಸತ್ ಮತ್ತು ಅಸತ್ ತತ್ವಗಳ ಆಧಾರವಿಲ್ಲದೆ ಯಾವ ವಿಕಾಸವೂ ಆವಿಷ್ಕಾರವೂ ಸಾಧ್ಯವಿಲ್ಲ. ಏನೋ ಒಂದು ಇದೆ ಅಂದಾಗ ಅದು ಸತ್‌ನ ಒಂದು ಭಾಗ ಎನ್ನಬಹುದೇ ಹೊರತು ಅಷ್ಟೇ ಸತ್ ಎನ್ನುವುದರ ಪೂರ್ಣಸ್ವರೂಪ ಎಂದು ಹೇಳುವಂತಿಲ್ಲ.

ಸತ್ ಎಂದರೇನೇ ಜ್ಞಾತೃಜ್ಞೇಯ, ಆತ್ಮ ಅನಾತ್ಮ ಎಂದು ಅರ್ಥವಾಗುತ್ತದೆ. ಸತ್ ಅಂದರೆ ಅಸತ್ತಿನ ತರಂಗಗಳಮೇಲೆ ಸಂಚರಿಸುವ ಸಗುಣೇಶ್ವರ. ಸತ್ ಎಂದರೆ ಪರಮಾತ್ಮ. ಅಸತ್ತನ್ನು ಅಂದರೆ ಪ್ರಕೃತಿಯನ್ನೂ ಮಾಯೆಯನ್ನೂ ನಿಯಮ್ಯಗೊಳಿಸುವ ಈಶ್ವರ. ಅವನು ಆತ್ಮನೂ ಹೌದು ಅನಾತ್ಮನೂ ಹೌದು. ಅಹುರಮಜ್ದ ಸಚೇತನವಾದುದರ ಸ್ವಾಮಿ. ಅಚೇತನ ವಾದುದರ ಸೃಷ್ಟಿಕರ್ತ. ಎಲ್ಲವೂ ಸದಸದಾತ್ಮಕವಾದದ್ದೆಂದು

ಶಂಕರರು ಹೇಳುತ್ತಾರೆ. ಬಾಹೆಮ್ (Boehme) ಇದನ್ನೇ ಎಲ್ಲ ವಸ್ತುಗಳೂ ಸತ್ ಅಸತ್ ಮೇಲೆ ನಿಂತಿವೆ ಎಂದು ಹೇಳಿದನು. ಈ ಜಗತ್ತೆಲ್ಲವೂ ಸತ್ತಿನಿಂದ ಅಸತ್ತಿನ ಆಕ್ರಮಣ. ಆದ್ದರಿಂದ ಸತ್ ಅಸತ್ತನ್ನು ತನ್ನಲ್ಲಿಯೇ ಸಮಾವೇಶ ಮಾಡಿಕೊಂಡಿದೆ. ಈ ಸೃಷ್ಟ್ಯಾತ್ಮಕ ಜಗತ್ತಿನಲ್ಲಿ ಸತ್ ತನ್ನನ್ನು ಉಳಿಸಿಕೊಂಡು ತನ್ನೊಳಗಿನ ಅಸತ್ತನ್ನು ಅಳಿಸುತ್ತದೆ.

ಜಗತ್ತು ಆಕಸ್ಮಿಕವಲ್ಲ ಯಾದೃಚ್ಛಿಕವಲ್ಲ. ಅಂದರೆ ಕಾರ್ಯಕಾರಣ ನಿಯಮ ರಹಿತವಲ್ಲ. ಸ್ವಾತಂತ್ರ್ಯ ಎನ್ನುವುದರ ಅರ್ಥ ಈ ನಿಯಮಿತತ್ವವೇ ಅಂತ್ಯಸತ್ಯವಲ್ಲ ಎಂದು. ಅದು ಇರುವುದೇ ಆ ರೀತಿ. ಪರಸ್ವರೂಪದಿಂದ ಇದು ಜಾರಿಬಂದದ್ದಲ್ಲ. ಇದನ್ನು ತರ್ಕಾತೀತ ಅಥವಾ ಪರಮಾತ್ಮನ ಇಚ್ಛಾಸ್ವಾತಂತ್ರ್ಯದ ರಹಸ್ಯವೆನ್ನಬಹುದು. ಈಶ್ವರನಿಲ್ಲದೆ ಜಗತ್ತಿಗೆ ಚಲನವಿಲ್ಲವೆಂದೂ, ಈಶ್ವರನೇ ಅದರ ಚಾಲಕನೆಂದೂ ಅರಿಸ್ಟಾಟಲ್ ಬಗೆಯುತ್ತಾನೆ. ಜಗತ್ತಿನ ದೃಷ್ಟಿಯಿಂದ ಅವನು ಕರ್ತೃವಾದರೂ ಭೋಕ್ತೃವಾದರೂ ತಾನುಮಾತ್ರ ಅಚಲನಾಗಿ ಉಳಿಯುತ್ತಾನೆ. ಜಗತ್ತಿನಲ್ಲಿ ನಡೆಯುವ ಪರಿಣಾಮಗಳಾವುವೂ ಅವನ ಸ್ವರೂಪವನ್ನು ಬದಲಿಸಲಾರವು. ಸೃಷ್ಟಿ ಎನ್ನುವುದು ಈಶ್ವರನ ಸ್ವರೂಪಕ್ಕೆ ವಿಶಿಷ್ಟವಾದ ಸ್ವಪ್ರಕಾಶ.

ಪ್ರಾಚೀನಗ್ರೀಕರು ' ಲೋಗಾಸ್ ' ಎಂದು ಯಾವುದನ್ನು ಕರೆದಿದ್ದರೋ ಆ ಋತುನಿಯಮ ಅಭಾವವಾಗುವ ಪಕ್ಷಕ್ಕೆ ಇಡೀ ಜಗತ್ತು ನಾಮರೂಪರಹಿತವಾದ ಅವ್ಯವಸ್ಥೆಯಾದೀತು. ಜಡವಾದ ಒಂದು ಮುದ್ದೆಯಂತಾದೀತು. ಪರಬ್ರಹ್ಮನಿಗೂ ಜಗತ್ತಿಗೂ ಮಧ್ಯಸ್ತವಾದದ್ದು ಬ್ರಹ್ಮನ ಚಿಚ್ಛಕ್ತಿ. ಜಗತ್ತಿನ ವ್ಯವಸ್ಥೆ ಮತ್ತು ಪ್ರಗತಿಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ಸಚೇತನ ಸೃಷ್ಟಿಕರ್ತನೊಬ್ಬನನ್ನು ಕಲ್ಪಿಸಿಕೊಳ್ಳಲೇಬೇಕು. ನಿಸರ್ಗದಲ್ಲಿ ಇತಿಹಾಸದಲ್ಲಿ ಏನೇನು ಅಭಿಕ್ರಮವನ್ನು ಕಾಣುತ್ತೇವೆಯೋ ಅವೆಲ್ಲವೂ ಮಹಾಚೈತನ್ಯವೊಂದರ ಸ್ಫುರಣವಾಗಿದೆ. ಇದು ಜ್ಞಾನಿಗಳ ದಿವ್ಯಚಕ್ಷುಸ್ಸನ್ನು, ಪ್ರಾಜ್ಞರ ಪ್ರಜ್ಞೆಯನ್ನು, ಕಲೌಪಾಸಕನ ಪ್ರತಿಭೆಯನ್ನು ಕುಶಲಕರ್ಮಿಯ ಕೌಶಲವನ್ನು ಸ್ಫುರಣಗೊಳಿಸುತ್ತದೆ. " ಯದ್ಯದ್ವಿಭೂತಿ ಮತ್ಸತ್ವಂ, ಶ್ರೀಮದೂರ್ಜಿತ ಮೇವವಾ ತತ್ತದೇವಾವಗಚ್ಛತ್ವಂ ಮಮ ತೇಜೋಂಶ ಸಂಭವಂ " ಎಂದು ಭಗವದ್ಗೀತೆ ಹೇಳುತ್ತದೆ.

ಪೃಥ್ವಿಯಮೇಲೆ ಈಶ್ವರನ ಸಾಮ್ರಾಜ್ಯವನ್ನು ಪ್ರತಿಷ್ಠಾಪನೆ ಮಾಡಬೇಕೆಂದು ಬಯಸುವವರೆಲ್ಲರ ವರಪ್ರಸಾದ ಪರಮಾತ್ಮನಿಂದಲೇ ಬರುತ್ತದೆ. ಈ ಜಗತ್ತಿನ ಅಸ್ತಿತ್ವಕ್ಕೆ ಕಾರಣ 'ಸತ್'. ಇದರ ಕ್ರಮಬುದ್ಧ ಮುನ್ನಡೆಗೆ ಕಾರಣ 'ಚಿತ್'. ಇದರ ಮುಕ್ತಿಗೆ, ತುಷ್ಟಿಗೆ, ಕಾರಣ 'ಆನಂದ'.

ಶ್ರದ್ಧಾವಂತ ಮನಸ್ಸಿಗೆ ಬಹು ಕ್ಲೇಶಕರವಾದ ವಿಚಾರವೆಂದರೆ ಈ ಜಗತ್ತಿನ ಅನಿಷ್ಟ ಮತ್ತು ಅಪೂರ್ಣತೆಗಳಿಗೂ ಮತದೃಷ್ಟಿಗೂ ಸಮನ್ವಯ ಮಾಡುವುದು ಹೇಗೆ ಎಂಬುದು. ಸೃಷ್ಟವಾದ ಪದಾರ್ಥಗಳಲ್ಲೆಲ್ಲಾ ಅಪೂರ್ಣತೆಯ ಅಂಶವಿದ್ದೇ ಇದೆ; ಅದಿಲ್ಲದಿದ್ದರೆ ಈಶ್ವರನಿಗೂ ಅವನ ಸೃಷ್ಟಿಗೂ ಏನೇನೂ ವ್ಯತ್ಯಾಸ ಕಾಣುವುದಿಲ್ಲ. ಅಪೂರ್ಣತೆ ಈಗಿರುವ ಜಗತ್ತಿನ ಒಂದು ಮುಖ. ಜಗದೊಡೆಯನೊಬ್ಬನ ಆಡಳಿತಕ್ಕೆ ಈ ಪ್ರಪಂಚ ಒಂದು ಭೋಗ ಭೂಮಿಯಾಗಿರಲೇಬೇಕೆಂಬ ಅಗತ್ಯವಿಲ್ಲ. ಮಾನವ ಜೀವನದ ಅನಿಷ್ಟ ಸಂಕಟಗಳೊಡನೆ ಸತತಹೋರಾಟ. ಅನಿಶ್ಚಿತತೆ ಅಶ್ರದ್ಧೆಗಳ ಮೇಲೆ ದಿಗ್ವಿಜಯಗಳಿಂದ ಆತ್ಮಸಂಸ್ಕಾರ ಮಾಡಿಕೊಳ್ಳುವುದೇ ಮಾನವ ಜೀವನದ ಗುರಿಯಾದರೆ.... ಈ ಉದ್ದೇಶಕ್ಕೆ ಜಗತ್ತು ಯುಕ್ತವಾದದ್ದೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಜೀವನದ ನಶ್ವರತೆಯ ಸಲುವಾಗಿಯೇ ಅದರ ಮೌಲ್ಯಕ್ಕೆ, ಘನತೆಗೆ, ಆಕರ್ಷಣೆಗೆ ಒಂದು ಬೆಲೆ ಇದೆ. ನೈತಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳ ಉತ್ಕರ್ಷವೇ ಜೀವನದ ಗುರಿಯಾಗಿದ್ದರೆ, ನೋವು ನಷ್ಟ ಕಷ್ಟಗಳು ಇಲ್ಲದಿರಲು ಸಾಧ್ಯವಿಲ್ಲ. ಕೀಟ್ಸ್‌ಕವಿ ಅವನ ಪತ್ರ ಒಂದರಲ್ಲಿ ಹೀಗೆ ಬರೆದ "ಚೇತನನನ್ನೂ ಪ್ರಾಜ್ಞನನ್ನಾಗಿಯೂ ಆತ್ಮನನ್ನಾಗಿಯೂ ರೂಪಿಸಲು ನೋವು, ಕಷ್ಟಕಾರ್ಪಣ್ಯಗಳ ಈ ಜಗತ್ತಿನ ಶಾಲೆ ಎಷ್ಟು ಅವಶ್ಯಕವೆಂಬುದನ್ನು ನೀನು ಕಾಣಲಾರೆಯಾ." ದುಃಖದ, ತಾಪದ, ಸಂಕೇತವಾದ ಶಿಲುಬೆ ಮುಕ್ತಿಯ ಸಂಕೇತವೂ ಆಗಿದೆ.

ಈಶ್ವರ ಜಗತ್ತನ್ನು ತನಗೆ ನಿಯಮ್ಯಗೊಳಿಸಿಕೊಳ್ಳುತ್ತಾನೆ. ಕೊನೆಗೆ ಪೃಥ್ವಿಯ ಪ್ರಾಕೃತಸ್ಥಿತಿ ಅಳಿದು ಈಶ್ವರನ ಸಂಕಲ್ಪವೇ ಉಳಿದೀತು. ಇದೇ ಹಿಂದುಗಳ ಬ್ರಹ್ಮಲೋಕ, ಕ್ರೈಸ್ತರ ದೇವರರಾಜ್ಯ, ಮುಸ್ಲಿಮರ ಸ್ವರ್ಗ. ಬ್ರಹ್ಮಲೋಕ ಸಂಸಾರದಿಂದ ಪ್ರತ್ಯೇಕವಾದ ಲೋಕವಲ್ಲ. ಅದು ವಿಮೋಚನೆ ಪಡೆದ ಸಂಸಾರಲೋಕ. ಸೂಫಿ ಎರ್‌ರಜಿ, "ಸ್ವರ್ಗವು ದೀಕ್ಷೆಪಡೆದವನ

ಸೆರೆ; ಜಗತ್ತು ನಂಬಿದವನ ಸೆರೆ ' ಎಂದಾಗ ಅವನ ಅರ್ಥವೇನೆಂದರೆ ಸ್ವರ್ಗ ಅನ್ನುವುದು ಅವ್ಯಕ್ತವಾದ ಪರತತ್ವದ ಉಪಾಧಿಸ್ಥಿತಿ. ಈ ಉಪಾಧಿಯುತ ಸ್ಥಿತಿ ಅನುಪಾಧಿಕ ಬ್ರಹ್ಮನ ವಿಶ್ವವ್ಯಾಪಕ ಪ್ರತಿಬಿಂಬ. ಕೋಟ್ಯಾನುಕೋಟಿ ವರ್ಷಗಳು ಉರುಳಿದ್ದರೂ ಸಹ ಹುಟ್ಟಿದ್ದೆಲ್ಲಕೂ ಒಂದು ಅಂತ್ಯವಿದೆ. ಇತಿಹಾಸದ ಸುತ್ತಲೂ ಅದಕ್ಕಿಂತಲೂ ವಿಸ್ತಾರವಾದ ಕ್ಷಿತಿಜವಿದೆ. ಕಾಲ ಅನಂತದಲ್ಲಿ ಹುದುಗಿಹೋಗಿದೆ.

ವಿಶ್ವದ ಉದ್ದೇಶದ ದೃಷ್ಟಿಯಿಂದ ನಾವು ಕಾರ್ಯಮಾಡುವಾಗ ಸಚ್ಚಿದಾನಂದ ಸ್ವರೂಪನಾದ, ಸ್ವತಂತ್ರನಾದ, ಸರ್ವಶಕ್ತನಾದ, ಸೌಶೀಲ್ಯ ಸೌಲಭ್ಯ ಗುಣಭೂಯಿಷ್ಠನಾದ ಪರಮಾತ್ಮನಲ್ಲಿ ನಂಬಿಕೆ ಇಡಬೇಕಾಗುತ್ತದೆ. ಬ್ರಹ್ಮ ಅಸಂಖ್ಯ ಸಂಕಲ್ಪಗಳ ಆಕರವಾಗಿದ್ದಾನೆ. ಅವನ ಸೃಷ್ಟ್ಯಾತ್ಮಕ ಅಂಶದಲ್ಲಿ ಈ ಸಂಕಲ್ಪಗಳಲ್ಲಿ ಒಂದೊಂದನ್ನು ಸ್ವೇಚ್ಛೆಯಿಂದ ನೆರವೇರಿಸಿಕೊಳ್ಳುತ್ತಾನೆ. ಸೃಷ್ಟಿಶಕ್ತಿ ಸತ್ ಸ್ವರೂಕ್ಕೆ ಹೊರತಾದುದ್ದಲ್ಲ. ಅದು ಹೊರಗಿನಿಂದ ಅದರೊಳಗೆ ಪ್ರವೇಶಿಸುವುದಿಲ್ಲ. ಅದ ಸತ್ ನಲ್ಲಿದೆ, ಅದರೊಳಗೇ ಸಮವಾಯವಾಗಿದೆ. ಸೃಷ್ಟಿಯ ಅಂಶವನ್ನು ನಾವು ಒತ್ತಿ ಹೇಳಬೇಕಾದಾಗ ಪರಬ್ರಹ್ಮನನ್ನು ಈಶ್ವರನೆಂದು ಕರೆಯುತ್ತೇವೆ. ಬ್ರಹ್ಮ, ಮತ್ತು ಈಶ್ವರ, ದೇವತ್ವ ಮತ್ತು ದೇವರು ಎರಡೂ ಒಂದೇ. ಬ್ರಹ್ಮನೆಂದರೆ ನಿರುಪಾಧಿಕ ಸತ್ಯ, ಅನೇಕ ಸಂಭವಗಳ ಅವ್ಯಕ್ತ ಸ್ವರೂಪ. ಈಶ್ವರನೆಂದರೆ ಇಚ್ಛಾಮಾತ್ರ ಸೃಷ್ಟಿ. ಆ ಬ್ರಹ್ಮ–ಈಶ್ವರರ ವ್ಯಕ್ತ ಸ್ವರೂಪನಾದ ಹಿರಣ್ಯಗರ್ಭನಿಂದ ಈ ಲೋಕ ಆಳಲ್ಪಡುತ್ತಿದೆ. ಜಗತ್ತು ವಿಶ್ವೇಶ್ವರನ **ಆವಿಷ್ಕಾರ**, ದೇವರ **ಸೃಷ್ಟಿ**. ಜಗತ್ತು ಈಶ್ವರನ ಒಂದು ಸಂಕಲ್ಪದ ಮೂರ್ತಸ್ವರೂಪ, ಅವನದೇಹ. ಮೂರ್ತಸ್ವರೂಪನಾದ ಈಶ್ವರನಿಗಿಂತಲೂ ಅಮೂರ್ತ ಬ್ರಹ್ಮ ಹೆಚ್ಚು ವ್ಯಾಪಕನಾಗಿದ್ದಾನೆ. ನಿರಾಕಾರ ಬ್ರಹ್ಮ ಮತ್ತು ಸಾಕಾರ ಈಶ್ವರ ಪ್ರತ್ಯೇಕ ವಸ್ತುಗಳಲ್ಲ. ಒಂದೇ ಪರತತ್ವವನ್ನು ವೀಕ್ಷಿಸುವ ಎರಡು ವಿಧ. ದುರವಗಾಹ್ಯವಾದ ಈ ಅಂತರ್ಯಾಮಿತತ್ವ ಎಲ್ಲವನ್ನೂ ಸಮಂಜಸಗೊಳಿಸುತ್ತದೆ ಮತ್ತು ಅರಿವಿಗೆ ನಿಲುಕುವಂತೆ ಮಾಡುತ್ತದೆ. ಶುದ್ಧ ಸತ್ ತತ್ವ ಕೇವಲ ಭಾವನಾರೂಪವಾದದ್ದಲ್ಲ, ಶೂನ್ಯವಲ್ಲ, ಎಲ್ಲ ವೈವಿಧ್ಯದ ಮೂಲ. ಸತ್ ತನ್ನ ವಾಸ್ತವಿಕಸ್ವರೂಪದಲ್ಲಿ ಎಲ್ಲ ವ್ಯಕ್ತ

ಸೃಷ್ಟಿಯನ್ನೂ ಒಳಗೊಂಡಿದೆ. ನಾವು ವಾಸಿಸುವ ಜಗತ್ತು ಸಂತತ ಪರಿಣಾಮಕ್ಕೆ ಒಳಗಾಗಿದೆ. ಇದೇ ಸಂಸಾರ, ಜೀವನದ ಪ್ರವಾಹ, ನಿರಂತರ ಚಲನೆಯ ಗತಿಶೀಲ ಜಗತ್ತು. ಜೀವನದ ಅರ್ಥವನ್ನು ಕಾಣಲು ಇದು ನಮಗೆ ಅವಕಾಶ ದೊರಕಿಸಿಕೊಡುವ ಸ್ಥಳ. ಜ್ಞಾನೋದಯದ ಆಚಿನ ದಡವನ್ನು ನಾವು ಮುಟ್ಟುವವರೆವಿಗೂ ಈ ಪ್ರವಾಹದಲ್ಲಿ ಮೀಯಬೇಕು. ಎಷ್ಟೇ ಭ್ರಮೆಯಿಂದ ಕೂಡಿರಲಿ, ಕ್ಷಣಿಕವಾಗಿರಲಿ, ಈ ಪ್ರಪಂಚದ ಎಲ್ಲ ವಸ್ತುಗಳಲ್ಲಿಯೂ ಸದ್ವಸ್ತುವಿನ ಅಂಶ ಇದ್ದೇ ಇವೆ. ಏಕೆಂದರೆ ಎಲ್ಲವೂ ಬ್ರಹ್ಮಮಯ. ಈ ಸಂಸಾರದಲ್ಲಿಯೇ ನಿತ್ಯರಾಗಿ ಬಾಳುವುದು ಸಾಧ್ಯ. ಏಕೆಂದರೆ ಇದೂ ಸಹ ಬ್ರಹ್ಮನ ಪ್ರಕಾರಗಳಲ್ಲಿ ಒಂದು.

### ೨. ಮಾನವನ ಇಕ್ಕಟ್ಟಿನ ಪರಿಸ್ಥಿತಿ

ವೈಜ್ಞಾನಿಕ ಉಪಕರಣಗಳ ಸಹಾಯದಿಂದ ಇಂದ್ರಿಯಗಳಿಗೆ ಗೋಚರವಾಗುವುದು ಮಾತ್ರ ವಿಶ್ವವಲ್ಲ. ಪರಮಾಣುವಿನ ಗರ್ಭವನ್ನು ತಿಳಿದರೆ ಮಾತ್ರ ಸಾಲದು. ಮಾನವನ ಅಂತರಂಗವನ್ನೂ ಅರಿಯಬೇಕು. ಉಪನಿಷತ್ತಿನ ಉಪದೇಶವಾದ 'ಆತ್ಮಾನಂವಿದ್ಧಿ', ಮತ್ತು ಗ್ರೀಕರ ಆದೇಶವಾದ 'ನಿನ್ನನ್ನು ತಿಳಿ' ಇವು ಆತ್ಮಜ್ಞಾನದ ಪ್ರಾಶಸ್ತ್ಯವನ್ನು ಒತ್ತಿ ಹೇಳುತ್ತವೆ. ಪ್ರಾಚೀನಕಾಲದಿಂದಲೂ ಮತತತ್ವದಾರ್ಶನಿಕರು ವ್ಯಕ್ತಿಯ ಜೀವನಾಡಿಯನ್ನು ಕಂಡುಹಿಡಿಯಲು ಪ್ರಯತ್ನಪಟ್ಟರು. ಅವನ ರಹಸ್ಯವಾದ ಕ್ರಿಯೆಗಳ ಒಳಹೊಕ್ಕು ನೋಡಿದರು. ಅವನ ಗೂಢವಾದ ಮುನ್ನೊಲವುಗಳನ್ನು ಅನುಸರಿಸಿದರು. ಆದರೂ ಮಾನವ ತನಗೇ ತಾನು ಒಂದು ರಹಸ್ಯವಾಗಿ ಉಳಿದಿದ್ದಾನೆ. ಪ್ಲೇಟೋ ಫೈಡ್ರಸ್‌ನಲ್ಲಿ ಪ್ರಭಾವಯುತವಾಗಿ ತೋರಿಸಿರುವಂತೆ ಸಾಕ್ರಟೀಸನೂ ಹೀಗೆಂದೇ ಭಾವಿಸಿದ್ದ. ಮಾನವ ತನ್ನನ್ನು ತಾನು ಅರಿತಿರುವುದಕ್ಕಿಂತಲೂ ಹೆಚ್ಚು ಮಹಿಮಾನ್ವಿತ. ತನ್ನನ್ನೇ ತನ್ನ ಜ್ಞಾನದ ವಿಷಯವನ್ನಾಗಿ ಮಾಡಿಕೊಂಡಾಗ ಅವನೇ ಅದನ್ನು ಅರಿಯುವ ಜ್ಞಾತೃವಾಗುತ್ತಾನೆ. ಹೀಗೆ ಮಾನವ ಸತತವಾಗಿ ತನ್ನನ್ನೇ ಮೀರಿಹೋಗುತ್ತಿದ್ದಾನೆ. ಅವನ ಆತ್ಮವು ಅವನ ಪ್ರತ್ಯಕ್ಷ ಅನುಮಾನಗಳನ್ನೂ ಅರ್ಥನಿಷ್ಪತ್ತಿಗಳನ್ನೂ ಸುಖದುಃಖಗಳ ಅನುಭವಗಳನ್ನೂ ಮೀರುತ್ತದೆ. ಮಾನವ ವ್ಯಕ್ತಿಯು ತನ್ನ ಯಥಾರ್ಥಜ್ಞಾನವನ್ನು ಪೂರ್ಣವಾಗಿ ಪಡೆಯಬಲ್ಲನೆಂದು

ಭಾವಿಸುವುದು ಒಂದು ಭ್ರಮೆ. ಮಾನವಜೀವನದಿಂದ ಹೊರಗೆ ನಿಂತು "ದೇವತೆಗಳಂತೆ ಮೇಲಿನಿಂದ ಮಾನವ ಜೀವನವನ್ನು ನೋಡಬಲ್ಲೆವು" ಎಂದು ನಂಬುವ ತಾತ್ವಿಕರನ್ನು ಪ್ಲೇಟೋ ಪರಿಹಾಸಮಾಡುತ್ತಾನೆ.

ಮಾನವ ತನ್ನ ದೇಹಕ್ಕಿಂತ ಮಿಗಿಲಾದವನು. ಮನೋವಿಜ್ಞಾನ ಬರಿಯ ದೇಹವಿಜ್ಞಾನದ ವಿಸ್ತೃತರೂಪವಲ್ಲ. ಮನುಷ್ಯನ ಸ್ವಭಾವದಲ್ಲಿ ಬರಿಯ ಜ್ಞಾನವಿಷಯವಲ್ಲದ ಅಂಶವೊಂದಿದೆ. ನಿಸರ್ಗದ ಲೋಕದಲ್ಲಿ ಮಾನವನಿಗೆ ವೈಶಿಷ್ಟ್ಯವನ್ನು ನೀಡಿರುವುದು ವಿಷಯಗಳ ಮಧ್ಯೆ ತಾನೂ ಒಂದು ವಿಷಯವಾಗದಿರುವ ಈ ಅಂಶ. ಮಾನವನು ಸಹಜಪ್ರವೃತ್ತಿಗಳ ಲೀಲೋಪಕರಣವಲ್ಲ, ಮನಸ್ಸಿನ ಬರಿಯ ಬಿಂದುವಲ್ಲ. ಶರೀರವಿಜ್ಞಾನ, ಮನೋವಿಜ್ಞಾನ, ಸಮಾಜ ವಿಜ್ಞಾನಗಳು ಮಾನವಸ್ವಭಾವವನ್ನು ಪೂರ್ಣವಾಗಿ ವಿವರಿಸಲಾರವು.

ಮಾನವನ ಮತಪ್ರವೃತ್ತಿ, ಭೂತ ಪ್ರೇತ ಭಾವನೆ, ಮಂತ್ರ ಮಾಟಗಳು, ಸಂಘಪ್ರವೃತ್ತಿ ಇವುಗಳನ್ನು ವಿವರಿಸಲು ಸಿದ್ಧಾಂತಗಳು ಮುಂದಿಡಲ್ಪಟ್ಟಿವೆ. ಇವು ಮಾನವನ ಭಯನಿವಾರಣೆಗೆ ಮತ್ತು ತನ್ನ ಒಂಟಿಗತನದ ಭೀತಿಯನ್ನುತನ್ನಿಂದಲೇ ಮರೆಮಾಚಿಕೊಳ್ಳಲು ಹೂಡಿದ ಕೃತ್ರಿಮ ಉಪಾಯ. ಆದರೆ ಈ ಭಯ, ಈ ಒಂಟಿಗತನದ ಭೀತಿ, ನಮ್ಮನ್ನು ಆವರಿಸಿರುವುದು ಏಕೆ? ವ್ಯಕ್ತಿಯನ್ನು ಭೀತಿಗೆ ಈಡುಮಾಡುವುದೇ ಸೃಷ್ಟಿಯ ಉದ್ದೇಶವೇ? ಅಥವಾ ಇವನಿಗೆ ಬೇರೆ ಮತ್ತೊಂದು ಪರ್ಯವಸಾನ ಇದೆಯೇ?

ಮತಧರ್ಮದ ಸಮಸ್ಯೆ ಮನುಷ್ಯನ ಬುದ್ಧಿಯ ಸಮಸ್ಯೆ. ಬುದ್ಧಿ ಅವನನ್ನೂ ಮತ್ತು ಅವನು ವಾಸಿಸುವ ಪ್ರಪಂಚವನ್ನೂ ಅರಿಯುವ ಉಪಕರಣ ಎಂದು ಭಾರತದ ತಾತ್ವಿಕರು ಭಾವಿಸುತ್ತಾರೆ. ಚಿಚ್ಛಕ್ತಿ ಮತ್ತು ಇಚ್ಛಾಶಕ್ತಿಗಳು ಮನುಷ್ಯರನ್ನು ಇತರ ಪ್ರಾಣಿವರ್ಗದಿಂದ ಬೇರ್ಪಡಿಸುತ್ತವೆ. ಚಿಚ್ಛಕ್ತಿಯು ಇಚ್ಛಾಶಕ್ತಿಯ ಮೂಲಕವಾಗಿ ನೀತಿಯ ಹೊಣೆಗಾರಿಕೆಯಲ್ಲಿ ಪರ್ಯವಸಾನಗೊಳ್ಳುತ್ತದೆ. ಸ್ವಾರ್ಥಕಾಮಕ್ಕೆ ಎಡೆಕೊಡುವ ಅವಿದ್ಯೆ ಮಾನವನನ್ನು ದುಃಖಕ್ಕೆ ಈಡುಮಾಡುತ್ತದೆ. ಮಾನವ ಪತಿತನಾಗುವ ಸ್ಥಿತಿಗೆ ಬರುತ್ತಾನೆ. ಪಶುಸ್ಥಿತಿಯಿಂದ ನಿಧಾನವಾಗಿ ಮಾನವ ಮೇಲೇರಿ ಬಂದಿದ್ದಾನೆ. ಸ್ವಸ್ವರೂಪ ಜ್ಞಾನವನ್ನು ಪಡೆದಿದ್ದಾನೆ. ಈ ಜ್ಞಾನ ಇವನ ಚೈತನ್ಯದಲ್ಲಿ

ಅತೃಪ್ತಿಯನ್ನೂ ಮೂಡಿಸಿದೆ, ಒಡಕು ಹುಟ್ಟಿಸಿದೆ. ಜೀವನ ದುಃಖಮಯ ವೆಂದು ಬುದ್ಧ ಹೇಳುತ್ತಾನೆ. ಕರ್ಮಬಂಧಕ್ಕೆ ಒಳಪಟ್ಟ ಜಗತ್ತಿನಲ್ಲಿ ನಾವಿದ್ದೇವೆ.

ಮಾನವನ ಇಚ್ಛಾಸ್ವಾತಂತ್ರ್ಯ ಸ್ವಾರ್ಥಸಾಧನೆಗೆ ಮಾತ್ರವಲ್ಲದೆ ನಿಷ್ಕಾಮ ಪ್ರೇಮಕ್ಕೂ ಮೂಲವಾಗಿದೆ. ಅವನ ಸ್ವರೂಪದ ನಿಜವಾದ ನಿಯಮ ಪ್ರೇಮ. ಅಂದರೆ ಎಲ್ಲ ಪ್ರಾಣಿಗಳೊಡನೆ ಸಮರಸ ಸಂಬಂಧ. ಆದರೂ ಈ ನಿಯಮದ ಮೇಲೆ ಅನೇಕ ಸಲ ತಾನೇ ಎದುರು ಬೀಳುತ್ತಾನೆ. ಈ ಉದ್ಧಟತನದ ಅಹಂಭಾವ ಆತ್ಮದಾಸ್ಯಕ್ಕೆ ದಾರಿಮಾಡಿಕೊಡುತ್ತದೆ. ತನ್ನನ್ನೇ ನಾಶಗೊಳಿಸುವ ಸ್ವಾತಂತ್ರ್ಯದ ದುರುಪಯೋಗ ಇವನನ್ನು ಸೆರೆ ಹಿಡಿಯುತ್ತದೆ. ಸ್ವಾತಂತ್ರ್ಯದ ದುರುಪಯೋಗ ವಾಸ್ತವವಾಗಿ ಸಂಭವಿಸು ತ್ತದೆ. ಸ್ವಾತಂತ್ರ್ಯವು ಅನೇಕ ಅನಿಷ್ಟಗಳಿಗೆ ಗುರಿಯಾಗುವ ಹಟಮಾರಿ ತನವನ್ನು ಬೆಳೆಸಿಕೊಳ್ಳಲು ಬಳಸಿಕೊಳ್ಳಲ್ಪಡುತ್ತದೆ. ಒಳ್ಳೆಯತನವೆಂದರೆ ಕೆಡಕುಮಾಡುವ ಶಕ್ತಿ ಇದ್ದೂ ಕೆಡುಕು ಮಾಡದಿರುವುದು. ಸ್ವಾತಂತ್ರ್ಯ ಇದ್ದ ಮಾತ್ರಕ್ಕೆ ಕೆಡಕು ಮಾಡುವುದು ಅನಿವಾರ್ಯವಲ್ಲ. ಇದು ಸ್ವಾತಂ ತ್ರ್ಯದ ದುರುಪಯೋಗದ ಪರಿಣಾಮ. ಈ ದೋಷ ನಮ್ಮ ದೇವರು ಗಳದಲ್ಲ, ನಮ್ಮ ಗ್ರಹನಕ್ಷತ್ರಗಳದಲ್ಲ, ಇದು ನಮ್ಮದೇ. ನಾವು ಹೊಣೆಗಾರಿಕೆ ಯನ್ನು ಹೊತ್ತ ಜೀವಿಗಳು. ನಾವು ಇಚ್ಛೆಪಟ್ಟರೆ ಕೆಟ್ಟುದನ್ನು ಬಿಡುವುದಕ್ಕೂ ಒಳ್ಳೆಯದನ್ನು ಆರಿಸಿಕೊಳ್ಳುವದಕ್ಕೂ ಶಕ್ತರಾಗಿದ್ದೇವೆ. ನಮ್ಮ ದೇಹಗಳನ್ನು ಬಂಧಿಸುವ ಅಥವಾ ನಮ್ಮ ಆತ್ಮಗಳನ್ನು ನಿರ್ಬಂಧಿಸುವ ಬಾಹ್ಯಶಕ್ತಿಗಳಿಗೆ ನಾವು ತುತ್ತಾಗಬೇಕಾಗಿಲ್ಲ.

ಮಾನಸಿಕವಾಗಿ ಮಾನವನು ಭರವಸೆಯ ಅಭಾವದಿಂದ ಖಿನ್ನನಾಗಿ ದ್ದಾನೆ. ನೈತಿಕವಾಗಿ ವ್ಯಾಕುಲ ಚಿತ್ತನಾಗಿದ್ದಾನೆ. ಆತ್ಮಪರೀಕ್ಷೆಯ ಸಮಯ ಗಳಲ್ಲಿ ತನ್ನ ಪೂರ್ವಸ್ಥಿತಿಯನ್ನು ವಿಮರ್ಶೆಗೆ ಈಡುಮಾಡುತ್ತಾನೆ, ಚಿಂತೆಗೆ ಒಳಗಾಗುತ್ತಾನೆ. ತನ್ನನ್ನೇ ನಂಬಲಾರದವನಾಗುತ್ತಾನೆ. ಭ್ರಾಂತಿಗಳ ಸೆಳೆತಕ್ಕೆ ಸಿಕ್ಕಿಬೀಳುತ್ತಾನೆ. ಅವನ ಮನಸ್ಸು ರೋಸಿ ಹೋಗುತ್ತದೆ.

### ೩. ಸತ್ಯದರ್ಶನವೇ ಮತಧರ್ಮ

ಅನುಭವ–ವೇದ್ಯವಾದ ಪ್ರಕೃತಿ ಮತ್ತು ಪುರುಷತತ್ವಗಳ ಆಧಾರದ

ಮೇಲೆ ಮಾನವ ಅಂತರ್ಯಾಮಿಯಾದ, ಶುದ್ಧ ಸತ್ವವೂ ಮುಕ್ತಚೇತನವೂ ಆದ, ಪರಮ ಪುರುಷನ ಭಾವನೆಯನ್ನು ಮನಸ್ಸಿಗೆ ತಂದುಕೊಳ್ಳುತ್ತಾನೆ. ನಮಗೆ ಪ್ರಾಪ್ತವಾದ ಬಾಹ್ಯ ಮತ್ತು ಆಂತರಿಕ ಆಧಾರಗಳಮೇಲೆ ವಾದ ಮಾಡುವುದಾದರೆ, ಪರಮಾತ್ಮತತ್ವ ವಿಚಾರ ಎಷ್ಟೇ ಸಮಂಜಸವಾದರೂ ಅದು ಒಂದು ಊಹೆಯಾಗಿಯೇ ಉಳಿಯುತ್ತದೆ. ಅಂತಿಮ ಸತ್ಯದ ಸ್ವರೂಪವನ್ನು ಕುರಿತ ತಾರ್ಕಿಕವಾದವೇ ಬೇರೆ, ಅದರ ಅಪರೋಕ್ಷಾನುಭವವೇ ಬೇರೆ. ಸ್ವಾನುಭವದ ಅನುಮೋದನ ಮುದ್ರೆ ಬೀಳುವವರೆಗೆ, ಅದು ಎಷ್ಟೇ ಸಮಂಜಸ ಭಾವನೆಯಾದರೂ ಮನಸ್ಸಿನಿಂದ ಅದು ಪ್ರತ್ಯೇಕವಾಗಿಯೇ ಉಳಿದಿರುತ್ತದೆ. ಅನ್ವೇಷಕನ ಮನಸ್ಸಿಗೂ ಭಕ್ತನ ಹೃದಯಕ್ಕೂ ತೃಪ್ತಿಯಾಗುವ ಬಗೆಯಲ್ಲಿ ತಾರ್ಕಿಕವಾದಗಳಿಂದ ಈಶ್ವರನ ಅಸ್ತಿತ್ವವನ್ನು ಸ್ಥಾಪಿಸಲು ಸಾಧ್ಯವಿಲ್ಲ. ಅವು ಆ ಕಲ್ಪನೆಯನ್ನು ಸೂಚಿಸಬಲ್ಲವು ಮಾತ್ರ. ಅದರ ಸಾರಾಂಶವೇನೆಂಬುದನ್ನು ತಿಳಿಸಬಲ್ಲವು. ಮಾನವನ ಅಂತರಂಗದ ರಚನೆಯಲ್ಲಿ ಅದರ ಪಾತ್ರ ಏನೆಂಬುದನ್ನು ಹೇಳಬಲ್ಲವು. ಆದರೆ ಪರಮಾತ್ಮನ ನೇರವಾದ ಅಪರೋಕ್ಷ ಜ್ಞಾನವನ್ನು ನಾವು ಪಡೆಯಬಹುದೆಂಬ ಒಂದು ಪ್ರಾಚೀನವಾದ ವ್ಯಾಪಕವಾದ ಪರಂಪರಾನುಗತ ಸಂಪ್ರದಾಯವಿದೆ. ಕಾಲ ದೇಶಗಳಿಂದ ಪರಸ್ಪರ ದೂರವಾದರೂ ಅನೇಕ ಮಹನೀಯರು ತಮ್ಮನ್ನು ವಿನಮ್ರರನ್ನಾಗಿ ಪರಿಶುದ್ಧಾತ್ಮರನ್ನಾಗಿ ಬ್ರಹ್ಮಾನಂದದಲ್ಲಿ ಮುಳುಗಿಸುವಂತಹುದಾಗಿ ಮಾಡುವ ಪರಮಾತ್ಮನ ಸಾಕ್ಷಾತ್ಕಾರಾನುಭವಕ್ಕೆ ಸಾಕ್ಷಿರೂಪರಾಗಿದ್ದಾರೆ. ಈ ಅಪರೋಕ್ಷಾನುಭೂತಿಯನ್ನು ಥಾಮಸ್ ಎಕ್ವಿನಾಸ್ ಪ್ರಾಯೋಗಿಕಜ್ಞಾನ(Cognitio Dei Experimentalis) ಎಂದು ಕರೆದಿದ್ದಾನೆ.

ಒಂದು ಹಳೆಯ ಸಂಸ್ಕೃತ ಶ್ಲೋಕ ಹೀಗೆ ಹೇಳುತ್ತದೆ; "ಅಸ್ತಿಬ್ರಹ್ಮ ಇತಿಚೇತ್ ವೇದ। ಪರೋಕ್ಷಂ ಜ್ಞಾನಮೇವತತ್। ಅಹಂ ಬ್ರಹ್ಮ ಇತಿಚೇತ್ ವೇದ ಪ್ರತ್ಯಕ್ಷಂ ಜ್ಞಾನಮುಚ್ಯತೇ॥" ಅಂದರೆ "ಬ್ರಹ್ಮನಿದ್ದಾನೆಂದು ತಿಳಿಯುವುದು ಪರೋಕ್ಷ ಜ್ಞಾನವೆನಿಸುತ್ತದೆ. ನಾನೇ ಬ್ರಹ್ಮ ಎಂದು ತಿಳಿಯುವುದು ಪ್ರತ್ಯಕ್ಷ ಜ್ಞಾನವೆನಿಸುತ್ತದೆ." ವೇದದ ಋಷಿಗಳ ಅಹಂಬ್ರಹ್ಮಾಸ್ಮಿ, ಏಸುವಿನ ಸ್ವಯಂ ದೇವತ್ವದ ಮಾತುಗಳು, ಅಲ್ ಹಲ್ಲಾಜ್ ಅವರ ನಾನೇ ಸತ್ಯ—"ಅನ ಅಲ್-ಹಕ್"—ಎಂಬ ಮಾತುಗಳು ಅತ್ಯಂತ ನಿಕಟ ಸಾದೃಶ್ಯ

ಹೊಂದಿವೆ. ಥಾಮಸ್ ಎಕ್ವಿನಾಸ್ ಇದನ್ನು "ಏಕೀಭಾವದಿಂದ ಪ್ರಾಪ್ತವಾದ ಜ್ಞಾನ" (Knowledge through Connaturality) ಎಂದು ಕರೆದಿದ್ದಾನೆ. ಶೀಲಕ್ಕೆ ಅಥವ ಸದ್ಗುಣಕ್ಕೆ ಸಂಬಂಧಪಟ್ಟಂತೆ ಎರಡು ದೃಷ್ಟಿಗಳನ್ನು ವಿಂಗಡಿಸಬಹುದು. ಉದಾಹರಣೆಗೆ ಧೈರ್ಯ ಮತ್ತು ಸ್ಥೈರ್ಯ. ಒಬ್ಬ ವ್ಯಕ್ತಿ ಈ ಸದ್ಗುಣಗಳ ವಿಚಾರಜ್ಞಾನವನ್ನು ಪಡೆದಿದ್ದರೂ ಆತನಲ್ಲಿ ಅದರ ಅನುಷ್ಠಾನವಿಲ್ಲದಿರಬಹುದು. ಮತ್ತೊಬ್ಬನು ಈ ಸದ್ಗುಣಗಳನ್ನು ತನ್ನಲ್ಲಿಯೇ ಅಳವಡಿಸಿಕೊಂಡು ಅವುಗಳೊಡನೆ ಏಕೀಭವಿಸಿ ತನ್ನ ಇಚ್ಛಾಶಕ್ತಿ ಕ್ರಿಯಾಶಕ್ತಿಗಳಲ್ಲಿ ಅವನ್ನು ಸಮಾವೇಶಗೊಳಿಸಿರಬಹುದು. ಇದೇ ರೀತಿ ಈಶ್ವರಸ್ವರೂಪದ ಜ್ಞಾನವನ್ನು ಬ್ರಹ್ಮವಿದ್ಯೆಯ ಅಧ್ಯಯನದಿಂದ ಪಡೆಯುವುದು ಒಂದು ರೀತಿಯಾದರೆ ಸ್ವಾನುಭವದಿಂದ ಅದರ ಸಾಕ್ಷಾತ್ಕಾರವನ್ನು ಪಡೆಯುವುದು ಮತ್ತೊಂದು ರೀತಿ.

ಈ ಅಪರೋಕ್ಷಾನುಭೂತಿ ಮಾನವಕುಲದಷ್ಟೇ ಪ್ರಾಚೀನವಾದುದು. ಯಾವೊಂದು ಬಣಕ್ಕೂ ಅಥವ ಮತಧರ್ಮಕ್ಕೂ ಪರಿಮಿತಗೊಂಡಿಲ್ಲ. ಈ ರೀತಿಯ ಅನುಭಾವದ ಇಂಗಿತಗಳನ್ನು ತತ್ತ್ವಜ್ಞಾನ ಮತಧರ್ಮಗಳಲ್ಲಿ ಮಾತ್ರವಲ್ಲದೆ ಕಲೆ ಮತ್ತು ಪ್ರಕೃತಿ ದೇವಿಯ ಉಪಾಸನೆ ಇವುಗಳಲ್ಲಿಯೂ ಕಾಣುತ್ತೇವೆ. ಗಾಢಪ್ರೇಮದಲ್ಲಿ, ಸೃಜನಾತ್ಮಕ ಕಲೆಯಲ್ಲಿ, ತತ್ತ್ವಾನ್ವೇಷಣೆಯಲ್ಲಿ, ಪರಮಾನಂದದ ಸಮಯಗಳಲ್ಲಿ, ದಾರುಣ ಸಂಕಟಸಮಯದಲ್ಲಿ, ಸತ್ಯ ಸೌಂದರ್ಯ ಶೀಲಗಳ ಸಮ್ಮುಖದಲ್ಲಿ, ಈ ನಶ್ವರ ಪ್ರಪಂಚದ ಸ್ಪರ್ಶದಿಂದ ಶಾಶ್ವತವೂ ಏಕೈಕವೂ ಆದುದರ ಅನುಭವದೆಡೆಗೆ ಒಯ್ಯಲ್ಪಡುತ್ತೇವೆ. ವಿಷಯ ವಿಷಯಿಗಳು ಅವಿನಾಭೂತವಾಗಿ ಬೆರೆಯುವ ಈ ಅಂತರ್ದೃಷ್ಟಿಯ ಸಮಯಗಳಲ್ಲಿ ರಾಗದ್ವೇಷಗಳನ್ನೂ ಮೀರಿದ ಒಂದು ಪ್ರಪಂಚದಲ್ಲಿ ಕಾಲಿಡುತ್ತೇವೆ; ಅಲ್ಲಿ ಪಾರ್ಥಿವಾನುಭವದ ಉಪಾಧಿಗಳು ಮರೆಯಾಗುತ್ತವೆ; ಕಾಲವೂ ಸಹ ತಟಸ್ಥವಾಗುತ್ತದೆ. ಸಂಸಾರದ ಸೆರೆಗನ್ನು ಮೀರಿದ ಬೆಳಕಿನ ಲೋಕ ಒಂದಿದೆ, ಅಲ್ಲಿ ಮನಸ್ಸಿನ ಎಲ್ಲ ಸಂಶಯಗಳೂ, ಹೃದಯದ ಎಲ್ಲ ಶೋಕಗಳೂ ಕೊನೆಗಾಣುತ್ತವೆ. ಈ ಸತ್ಯದ ಸಾಕ್ಷಾತ್ಕಾರಾನುಭವವೇ, ಇದರಲ್ಲಿ ನೆಲೆಸುವುದೇ ಮೋಕ್ಷ. ನಮ್ಮ ಪರಿಮಿತಿಯಿಂದ, ಅಪೂರ್ಣತೆಯಿಂದ, ಭ್ರಾಂತಿಯಿಂದ, ಅಜಾಗ್ರತೆಯಿಂದ, ಬಂಧನದಿಂದ ಬಿಡುಗಡೆ. ಆನಂದದ,

ಪವಿತ್ರ ನಿರಾಮಯವಾದ ಸ್ಥಿತಿಯಲ್ಲಿ ಬಾಳುವಂತಹ ಪುನರ್ಜನ್ಮ.

ಮೋಕ್ಷ, ನಿರ್ವಾಣ, ದೇವರರಾಜ್ಯ ಇವು ಈ ಜೀವಾನಾನಂತರದ ಸ್ಥಿತಿಗಳೆಂದೂ ಇಂದಿನದಕ್ಕಿಂತ ಅತಿ ದೂರದ ಸ್ಥಿತಿಯೆಂದೂ ಚಿತ್ರಿಸುವುದು ಸರಿಯಲ್ಲ. ಸ್ವರ್ಗಸಾಮ್ರಾಜ್ಯ ನಾವು ಸತ್ತಮೇಲೆ ಪಡೆಯುವ ವಿಶ್ರಾಮಧಾಮವಲ್ಲ. ಅಥವ ಎಂದೋ ಒಂದು ದಿನ ಭೂಮಿಗೆ ಇಳಿಯುವಂಥದೂ ಅಲ್ಲ. ಅದು ನಮ್ಮ ಜ್ಞಾನದ ಪರಿವರ್ತನೆ, ಅಂತರಂಗದ ವಿಕಾಸ, ಒಂದು ರೂಢಮೂಲ ಬದಲಾವಣೆ. ನಾವು ಲೋಕಾತೀತರಾಗಿ ಲೋಕದ ಪರಿವರ್ತನೆಗೂ ಕಾರಣರಾಗಬೇಕಾದರೆ ಆಧ್ಯಾತ್ಮಿಕ ಸ್ವಾತಂತ್ರ್ಯವೇ ನಮ್ಮ ಶಕ್ತಿ. ಅದು ಇಲ್ಲಿಯೇ ಈಗಲೇ ಪಡಯಬಹುದಾದಂತಹ ಜೀವನ್ಮುಕ್ತಿ.

ಈ ಅನುಭವ ಅಪರೋಕ್ಷವೆಂದ ಮಾತ್ರಕ್ಕೆ ಇದು ಅಪ್ರಾಮಾಣ್ಯವಲ್ಲ. ಈ ಅಂತರ್ಜ್ಞಾನವು ವಿಚಾರದ ಸಮರ್ಥನೆಗೆ ಒಳಗಾಗುತ್ತದೆ. ಅದನು ವಿರೋಧಿಸುವುದಿಲ್ಲ. ವಿವೇಕ ಮತ್ತು ಜ್ಞಾನ ಒಂದುಗೂಡಿಯೇ ಹೋಗುತ್ತದೆ. ಭಗವದ್ಗೀತೆಯಲ್ಲಿ ಹೇಳುವಂತೆ "ವಿಜ್ಞಾನ ಸಹಿತವಾದ ಜ್ಞಾನ" ನಮ್ಮ ಗುರಿ. ಉಪನಿಷತ್ತಿನ ತತ್ತ್ವಗಳು ಧ್ಯಾನದಿಂದ ಪಡೆದ ಫಲಗಳಾದರೂ ತರ್ಕಬದ್ಧವಾದ ರೀತಿಯಲ್ಲಿಯೇ ಪ್ರತಿಪಾದಿಸಲ್ಪಟ್ಟಿವೆ. ಮೀಮಾಂಸೆ ಅಥವಾ ವಿಚಾರ ಪದ್ಧತಿಗೆ ಉಪನಿಷತ್ತುಗಳಲ್ಲಿ ಪ್ರಾಧಾನ್ಯತೆ ಇದೆ.

ಮತಿಜ್ಞಾನ ಮತ್ತು ಅಖಂಡ ದರ್ಶನಗಳ ಸಂಬಂಧ ಅಂಶಾಂಶಿ ಸಂಬಂಧ. ಅಖಂಡ ದರ್ಶನವು ನಿತ್ಯವೂ, ನಿರವದ್ಯವೂ ಆದುದರ ಸ್ವರೂಪವನ್ನು ನಮಗೆ ಅಭಿವ್ಯಕ್ತಗೊಳಿಸುತ್ತದೆ. ಇದರ ಕಾಲಾತೀತ ಸ್ವರೂಪದಲ್ಲಿ ಕಾಲವೂ, ಇತಿಹಾಸವೂ ಸಮಾವೇಶಗೊಳ್ಳುತ್ತದೆ. ಸತ್ಯವೆಂದರೆ ನಮ್ಮ ಇಂದ್ರಿಯಗಳಿಗೂ, ಬುದ್ಧಿಗೂ, ಗೋಚರವಾಗುವ ಅದರ ಛಾಯೆಯಲ್ಲ. ಆತ್ಮವು ತನ್ನ ಅಂತರಾಳದಲ್ಲಿ ಅನುಭವಿಸುವ ನವೋನ್ಮೇಷ ಶಾಲಿಯಾದ ರಹಸ್ಯ. ಇದು ಜ್ಞಾತೃಜ್ಞೇಯಗಳ ಪ್ರಶ್ನೆಯಲ್ಲ; ಯಾವ ಲೌಕಿಕ ಉಪಮಾನದಿಂದಲೂ ವಿವರಿಸಲು ಅಸಾಧ್ಯವಾದ ಗಹನವಾದ ಜ್ಞಾತೃಜ್ಞೇಯಗಳ ಐಕ್ಯವನ್ನೊಳಗೊಂಡ ಸಾಕ್ಷಾತ್ಕಾರ.

ವಿಲಕ್ಷಣ ಮನೋವೃತ್ತಿಯುಳ್ಳ ಕೆಲವರಲ್ಲಿ ಈ ಆಧ್ಯಾತ್ಮಿಕ ಅನುಭಾವವು ಚಿತ್ತವಿಕಾರ, ಮೂರ್ಛೆ, ಉನ್ಮಾದ, ಅಶರೀರವಾಣಿಯ ಅನುಭವ,

ಅಲೌಕಿಕ ವಸ್ತುದರ್ಶನ ಮುಂತಾದ ಅಸಾಧಾರಣ ಅನುಭವಗಳೊಡನೆ ಜೊತೆ ಗೂಡಿರುತ್ತದೆ. ಇನ್ನೂ ಕೆಲವು ಅನುಭವಗಳು ಈ ರೀತಿಯ ಪ್ರಬಲ ಭಾವೋದ್ರೇಕಗಳಿಂದ ತುಂಬಿರುತ್ತವೆ. ಎಲ್ಲ ಸ್ಫೂರ್ತಿಯುತ ಕೃತಿಗಳೂ ಅಂತ ರಾವೇಶಭರಿತರೆಂದು ಭಾವಿಸಿಕೊಳ್ಳುವವರಿಂದಲೇ ಸಾಧ್ಯ, ಆದರೆ ಭಾವಾ ವೇಶವಷ್ಟೇ ಸಾಲದು. ಈ ಅಧ್ಯಾತ್ಮ ಅನುಭವ ಕೆಲವು ವೇಳೆ ಚಿತ್ತವಿಕಾರ ಗಳಿಂದ ಕೂಡಿದ್ದರೂ ಅವು ಮನೋರೋಗದ ಚಿಹ್ನೆಗಳಲ್ಲ. ಮಹಾ ದಿವ್ಯ ಜ್ಞಾನಿಗಳೆಲ್ಲರೂ ಚಿತ್ತ ಸ್ವಾಸ್ಥ್ಯವುಳ್ಳವರೇ. ನರಸಂಬಂಧ ದೌರ್ಬಲ್ಯ ಅಲ್ಲಲ್ಲಿ ಕಂಡುಬಂದರೂ ಅದು ಪ್ರಾಸಂಗಿಕ. ಜಡತ್ವದಿಂದ ಚೇತನ ಸ್ಥಿತಿಗೆ, ಅವಿದ್ಯೆ ಯಿಂದ ವಿದ್ಯೆಯ ಕಡೆಗೆ ಸಾಗುವ ಪ್ರಗತಿ ನಮ್ಮ ಮನೋಮಯ ಕೋಶದಲ್ಲಿ ತಲ್ಲಣವನ್ನುಂಟುಮಾಡುತ್ತದೆ. ಈ ದೇಹದ ವ್ಯವಸ್ಥೆಯನ್ನು ಸಡಲಿಸದೇ ಜಾಗ್ರತ ಚಿತ್ತಕ್ಕೂ ಸುಪ್ತ ಚಿತ್ತದ ಅವಸ್ಥೆಗೂ ಇರುವ ಸಾಮಾನ್ಯ ಸಂಬಂಧ ವನ್ನು ಬುಡಮೇಲುಮಾಡಲು ಸಾಧ್ಯವಾಗಲಾರದು. ಕಟ್ಟುಗಳು ಹಠಾತ್ತಾಗಿ ಸಡಿಲವಾಗುವುದರಿಂದಲೂ ಮನಸ್ಸು ತನ್ನ ಸಹಜ ಸ್ಥಿತಿಯನ್ನು ಮೀರಿ ಚಿಮ್ಮುವುದರಿಂದಲೂ ಸಮಚಿತ್ತಸ್ಥಿತಿ ಅವ್ಯವಸ್ಥೆಗೊಳ್ಳಬಹುದು. ಆವೇಗ, ಆವೇಶ, ಉನ್ಮಾದ, ಉದ್ರೇಕಗಳು ಆಧ್ಯಾತ್ಮಿಕ ಅನುಭಾವದ ಆವಶ್ಯಕ ಚಿಹ್ನೆಗಳಲ್ಲ. ಅವು ಕೃತಕ ಮೂಲಗಳಿಂದಲೂ ಉದ್ಭವಿಸಬಹುದು. ನಿಜ ವಾದ ಆನಂದ ಬರಿಯ ರೋಮಾಂಚನವಲ್ಲ, ಪರಮಾರ್ಥದ ಗಂಭೀರಾನುಭವ.

ಆಧ್ಯಾತ್ಮ ಅನುಭವದಲ್ಲಿ ನವೋನ್ಮೇಷಶಾಲಿನಿಯಾದದ್ದು ಅದ ರೊಡನೆ ಸಂಭವಿಸುವ ಮನಸ್ಸಿನ ವೈಪರೀತ್ಯಗಳಲ್ಲ; ಪರಮಾನುಗ್ರಹದ ಪರಿಣಾಮವಾದ ಆತ್ಮೀಯ ಶಾಂತಿ, ಆನಂದ, ಸಂಪೂರ್ಣ ಜಾಗ್ರತಿ, ಪ್ರೇಮಾನುಕಂಪಗಳು. ಜೀವಬ್ರಹ್ಮರ ಸಾಯುಜ್ಯದಿಂದ ಹೊರಹೊಮ್ಮಿದ ಜೀವನದ ಮಾರ್ಗ ಇದರಿಂದ ಉತ್ಪನ್ನವಾಗುತ್ತದೆ. ವ್ಯಕ್ತಿಯಲ್ಲಿ ಅಂತ ರ್ನಿಹಿತವಾದ ಜ್ಞಾನಶಕ್ತಿ, ಇಚ್ಛಾಶಕ್ತಿ, ಭಾವಶಕ್ತಿಗಳನ್ನು ಒಂದಾಗಿ ಬೆಸೆದು ಪೂರ್ಣವ್ಯಕ್ತಿತ್ವವನ್ನು ದೃಢೀಕರಿಸುವದರಿಂದ ಈ ಅನುಭಾವಕ್ಕೆ ವಿಶೇಷ ಕರ್ತೃತ್ವದ ಬೆಲೆಯೂ ಉಂಟು. ಸಾಮಾನ್ಯ ಸ್ತ್ರೀಪುರುಷರಲ್ಲಿಯೂ ಸಹ ಈ ದೈವೀಶಕ್ತಿ ರೂಪುಗೊಂಡು ಅವರ ವಿಚಾರ ಆಚಾರಗಳಲ್ಲಿ ನವ್ಯ ಲಕ್ಷಣಗಳನ್ನು ಹೊರಸೂಸುತ್ತದೆ.

# ಅಧ್ಯಾತ್ಮಜೀವನ ಮತ್ತು ಜೀವಂತ ಮತಧರ್ಮಗಳು

ಅನಿತ್ಯವೂ ಪರಿವರ್ತನಶೀಲವೂ ಆದ ಈ ಪ್ರಪಂಚದ ಬಾಹ್ಯಾಂತರ ಗಳಲ್ಲಿ ಅನಂತವೂ, ಅಲೌಕಿಕವೂ ಆದ ಪರತತ್ವದ ದಿವ್ಯಾನುಭವವನ್ನು ನೇರವಾಗಿ ಪಡೆದ ಮಹಾದ್ರಷ್ಟಾರರ ಸ್ವಾನುಭೂತಿಯ ಮೇಲೆಯೇ ಎಲ್ಲ ಮತಧರ್ಮಗಳೂ ಸ್ಥಾಪಿಸಲ್ಪಟ್ಟಿವೆ. ಮನುಷ್ಯಕುಲದ ಎಲ್ಲ ಮತಧರ್ಮ ಗಳಲ್ಲೂ ಈ ರೀತಿಯ ಬ್ರಹ್ಮಸಾಯುಜ್ಯದ, ದೈವಶಕ್ತಿಯ ಸ್ವಾನುಭವವು ಸಮಾನವಾದ ವಿಶಿಷ್ಠ ಗುಣವಾಗಿರುತ್ತದೆ.

## ೧. ಹಿಂದೂಧರ್ಮ

ಪ್ರಾಚೀನ ಕಾಲದಿಂದಲೂ ಭಾರತದ ಜನರ ಮನಸ್ಸಿನಲ್ಲಿ ದೇವರ ಸಾಕ್ಷಾತ್ಕಾರವೇ ಮತಧರ್ಮದ ತಿರುಳೆಂಬ ನಂಬಿಕೆ ಪ್ರಭಾವಿತವಾಗಿ ಸಂತತವಾಗಿ ನಾಟಿಬಿಟ್ಟಿದೆ. ವಿದ್ಯೆ, ದರ್ಶನ, ಜ್ಞಾನ ಇವು ಉಪ ನಿಷತ್ತುಗಳ ಗುರಿ. ಬುದ್ಧಿ ಮಾತ್ರವಲ್ಲದೆ ಇಡೀ ಮಾನವ ವ್ಯಕ್ತಿತ್ವವೇ ಕೂಡಿಕೊಂಡಿರುವ ಈ ಮಾರ್ಗ ಒಂದು ಹೊಸ ವಿಚಾರಧಾರೆ. ಬ್ರಹ್ಮಾನು ಭಾವ ಸತ್ಯದ ನೇರವಾದ ಚೈತನ್ಯಮಯವಾದ ಅನುಭಾವ. ಮಾನವನ ಅಂತರಾತ್ಮ ಜ್ಯೋತಿರ್ಮಯವಾದ ಬ್ರಹ್ಮನೊಡನೆ ಏಕರೂಪವಾಗಿರುವ ದೈವಾನುಭವದ ಸತ್ಯಸಾಕ್ಷಿ. ಈ ಅನುಭಾವ ಚಿದಂತರಂಗದಲ್ಲಿ ನೇರ ವಾದ ಅಂತರ್ಬೋಧೆಯಿಂದ ಸ್ಫುರಿಸುತ್ತದೆ. ಈ ಅನುಭವ ಸ್ವಯಂಪ್ರಕಾಶ ವಾದದ್ದು.

ನಮ್ಮ ಅಂತರಾತ್ಮ ಪರಮಾತ್ಮನಿಂದ ಅಭಿನ್ನ ಎಂದು ಉಪನಿಷತ್ತು ಗಳು ಮೊಳಗುತ್ತವೆ. ದೇವತೆಯೊಂದನ್ನು ಆರಾಧನೆ ಮಾಡುವಾತ ತಾನು ಬೇರೆ, ಪೂಜಿಸುವ ದೇವತೆಯೇ ಬೇರೆ ಎಂದು ಭಾವಿಸಿದರೆ ಅವನು ಜ್ಞಾನಿ ಯಲ್ಲ, ಎಂದು ಹೇಳುತ್ತದೆ. "ಯಃ ಪ್ರಥಿವ್ಯಾಮ್ ತಿಷ್ಠನ್ ಪ್ರಥಿವ್ಯಾಮ್ ಅಂತರಃ, ಯಂ ಪ್ರಥಿವೀ ನವೇದ, ಯಸ್ಯ ಪೃಥಿವೀ ಶರೀರಮ್, ಯಃ ಪ್ರಥಿ ವ್ಯಾಮ್ ಅಂತರೋ ಯಮಯತಿ, ಏಷತ ಆತ್ಮಾ ಅನ್ತರ್ಯಾಮಿ ಅಮೃತಃ"—

ಎಲ್ಲ ಜಂತುಗಳಲ್ಲಿಯೂ ಅವುಗಳಿಗೆ ತಿಳಿಯದೆಯೇ ವಾಸಿಸುತ್ತಿದ್ದು, ಇಡೀ ಲೋಕವನ್ನೇ ತನ್ನ ಶರೀರವನ್ನಾಗಿಸಿರುವ ಅಂತರ್ಯಾಮಿಯೂ ಅಮೃತನೂ ಆಗಿರುವವನೇ ನಮ್ಮ ಒಳಗಿನ ಆತ್ಮ.

ಆತ್ಮದ ಅಮರತ್ವವನ್ನು ಅರಿತುಕೊಳ್ಳದೆ ಮಾನವ ಕರ್ಮಬಂಧನದಲ್ಲಿ ಸಿಲುಕುತ್ತಾನೆ. ಅದೃಶ್ಯ ಬಾಹ್ಯಶಕ್ತಿಗಳಿಂದ ಅತ್ತಲಿಂದ ಇತ್ತ ಎಳೆದಾಡಲ್ಪಡುವ ಕೈಗೊಂಬೆಯಾಗುತ್ತಾನೆ. ಅವನು ಯಾವ ಪ್ರಯತ್ನವನ್ನೂ ಮಾಡುವುದಿಲ್ಲ. ಘಟನೆಗಳು ತಾನಾಗಿಯೇ ಸಂಭವಿಸುತ್ತವೆ. ಮಾನವ ವ್ಯಕ್ತಿ ಒಂದು ಸಂಕೀರ್ಣ ಜಂತು. ತಾನು ಒಂದು ಘಟಕ ಎಂಬ ಭಾವನೆ, ಅವನು ಪಡೆದಿರುವ ದೇಹದಿಂದ, ಹೆಸರಿನಿಂದ ಮತ್ತು ಕಲಿತ ಕೆಲವು ಅಭ್ಯಾಸಗಳಿಂದ ಉಂಟಾಗುತ್ತದೆ. ತಾನು ಒಂದು ಎಂಬುವ ನಂಬಿಕೆ ಒಂದೇ ಹೆಸರಿನ ಸಂಬೋಧನೆಯಿಂದ, ಒಂದೇ ರೀತಿಯ ದೈಹಿಕ ವೇದನೆಯಿಂದ, ಅಭ್ಯಾಸಗಳಿಂದ, ಸ್ವಭಾವದಿಂದ ಅವನಿಗೆ ಉಂಟಾಗುತ್ತದೆ. ತನ್ನಲ್ಲಿನ ಸಮಷ್ಟಿ ಆತ್ಮದ ಅರಿವಾದಾಗ ಮಾತ್ರ ಮಾನವ ಸ್ವಾತಂತ್ರ್ಯದ ಒಂದು ಹೊಸ ಸ್ಫೂರ್ತಿಯಿಂದ ಕ್ರಿಯಾವಂತನಾಗುತ್ತಾನೆ.

ಭಗವದ್ಗೀತೆಯಲ್ಲಿ ನಿರ್ಗುಣಬ್ರಹ್ಮನ ಉಪಾಸನೆ ಸಗುಣೇಶ್ವರನ ಭಕ್ತಿಯೊಡನೆ ಬೆರೆತಿದೆ. ಬ್ರಹ್ಮಸಂಸ್ಪರ್ಶ ಕೃಷ್ಣಾರ್ಜುನ ಸಂವಾದದ ರೂಪವನ್ನು ತಾಳಿದೆ. ಜೀವಾತ್ಮನೂ ಪರಮಾತ್ಮನ ಅಂಶ. ಪಾಶ್ಚಾತ್ಯ ಅನುಭಾವಿಗಳು ಹೇಳುವಂತೆ ಪರಮಾತ್ಮನ "ಕಿಡಿ". ಈ ಕಿಡಿ ಮತ್ತೆ ತನ್ನ ಅಮರವಾದ ದಿವ್ಯಜ್ಯೋತಿಯನ್ನು ಸೇರುತ್ತದೆ. ಭಗವದ್ಗೀತೆಯಲ್ಲಿ ಪ್ರಾರ್ಥನೆ ಮತ್ತು ಭಕ್ತಿಗಳಿಗೆ ಹೆಚ್ಚು ಪ್ರಾಶಸ್ತ್ಯ ಕೊಡಲಾಗಿದೆ. ಪರಮಾತ್ಮನ ಅನುಗ್ರಹಕ್ಕೆ ಪಾತ್ರವಾದ ಜೀವಾತ್ಮನು ನಾಮರೂಪ ಪ್ರಪಂಚವನ್ನು ದಾಟಿ ಅಂತಿಮ ಪುರುಷಾರ್ಥದ ಸವಿಯನ್ನು ಪೂರ್ವಭಾವಿಯಾಗಿಯೇ ಅನುಭವಿಸುತ್ತಾನೆ.

ರಾಮಭಕ್ತಿ ಅಥವಾ ಕೃಷ್ಣಭಕ್ತಿಯನ್ನನುಸರಿಸುವ ವೈಷ್ಣವ ಪಂಥದಲ್ಲಿ ಭಕ್ತಿಪ್ರೇಮಗಳ ಮೂಲಕ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯುತ್ತಾರೆ. ರಾಮಾನಂದ, ತುಳಸೀದಾಸ, ಶ್ರೀ ಚೈತನ್ಯ, ತುಕಾರಾಮ, ಮತ್ತು ಇತರ ಮಹಾರಾಷ್ಟ್ರ ಸಂತರೂ, ಮೀರಾಬಾಯಿ ಇವರೆಲ್ಲರೂ ಆಂತರಂಗಿಕ

ಸ್ವಾನುಭವದಿಂದಲೇ ಈಶ್ವರ ಸಾನ್ನಿಧ್ಯವನ್ನು ಪಡೆಯಲು ಇಚ್ಛಿಸಿದವರು. ಈಶ್ವರ ಸಾಕ್ಷಾತ್ಕಾರ ಬಯಸುವ ಸಾಧಕ ತಾಯಿಯನ್ನು ಕಳೆದುಕೊಂಡ ಮಗುವಿನಂತೆ ಎನ್ನುತ್ತಾರೆ.

" ತಾಯಿಯನ್ನು ಕಾಣದ ಮಗು ಅಳುತ್ತದೆ, ಅತಿ ಕಷ್ಟ
ಅನುಭವಿಸುತ್ತದೆ.
ಅಲೆಯ ಮಧ್ಯದಲ್ಲಿದ್ದ ಮೀನನ್ನು ಹೊರಗೆಳೆದರೆ, ಅದಕ್ಕೆ
ಅದೇ ಯಾತನೆ.
ತುಕಾ ಹೇಳುತ್ತಾನೆ ತನ್ನ ಸ್ಥಿತಿಯೂ ಅಂತೆಯೇ
ಆಗಿದೆಯೆಂದು"

ಹೀಗೆಂದು ತುಕಾರಾಮರು ಹಾಡಿದ್ದಾರೆ.

ದಕ್ಷಿಣ ಭಾರತದ ಮಾಣಿಕ್ಯವಾಶಕರೇ ಮೊದಲಾದ ಶೈವಸಂತರು ಪರಮಾತ್ಮನನ್ನು ಶಿವನೆಂದು ಭಜಿಸಿ ಭಕ್ತಿಯ ಮೂಲಕ ಅವನ ಸಾನ್ನಿಧ್ಯವನ್ನು ಪಡೆಯಲು ಇಚ್ಛಿಸುತ್ತಾರೆ.

ಕಬೀರ, ನಾನಕ್ ಮತ್ತು ಸಿಕ್ಕರ ಗುರುಗಳು ಈ ಭಕ್ತಿಪಂಥಕ್ಕೆ ಸೇರಿದವರು. ಕಬೀರದಾಸರ ಈ ವಚನವನ್ನು ಕೇಳಿ:

" ನೀರಿನಲ್ಲಿರುವ ಮೀನು ದಾಹ ಎಂದರೆ ನನಗೆ ನಗೆ ಬರುತ್ತದೆ. ನೀನು ಇರುವೆಡೆಯೇ ಪರತತ್ತ್ವ ಸನ್ನಿಹಿತವಾಗಿರುವಲ್ಲಿ ಕಾಡಿನಿಂದ ಕಾಡಿಗೆ ತಲ್ಲಣಿಸಿ ಅಲೆಯುವುದೇಕೆ? ಸತ್ಯ ಇಲ್ಲಿಯೇ ಇದೆ. ಕಾಶಿಗೆ ಹೋದರೇನು? ಮಥುರೆಗೆ ಹೋದರೇನು? ನಿನ್ನಲ್ಲಿಯೇ ನಿನ್ನ ದೇವರನ್ನು ಕಾಣದಾದರೆ, ಇಡೀ ಜಗತ್ತು ನಿನಗೆ ಅರ್ಥರಹಿತವಾಗುವುದು."

ಸಾಧಕನನ್ನು ಕುರಿತು " ನಿನ್ನ ಸ್ವಾಮಿಯು ಸನಿಹದಲ್ಲೇ ಇರುವನು. ಅವನನ್ನು ಕಾಣಲು ತಾಳೇಮರ ಹತ್ತಬೇಕೆ? " ಎಂದು ಕೇಳುತ್ತಾನೆ.

ರಾಮಕೃಷ್ಣ, ದೇವೇಂದ್ರನಾಥ ಠಾಕೂರ, ರಮಣ ಮಹರ್ಷಿ ಇವರುಗಳು ಆಧುನಿಕ ಕಾಲದ ಋಷಿ ದ್ರಷ್ಟಾರರಾಗಿದ್ದಾರೆ.

ಹಿಂದೂ ಧರ್ಮದ ಗುರಿ ಮಾನವಕುಲದ ಆತ್ಮೋನ್ನತಿ, ಮನುಷ್ಯ ಸ್ವಭಾವದ ಆಧ್ಯಾತ್ಮಿಕ ಪರಿವರ್ತನೆ. ಮತವೆಂದರೆ ಪುನರ್ಜನ್ಮ, " ದ್ವಿತೀಯಜನ್ಮ". ಈ ದ್ವಿಜತ್ವ ಮನುಷ್ಯನ ಅಂತರಂಗಕ್ಕೆ ಸೇರಿದ್ದು. ಇದು

ನವಚೈತನ್ಯದ ಹೊಸಬಾಳು. ಪ್ರಜ್ಞಾಪಾರಮಿತದ ಬಾಳು. ಮಾನವನ ಪ್ರಜ್ಞೆಗೆ ಎರಡು ಅಂತಸ್ತುಗಳು. ಒಂದು ಕಾಲದ್ದು ಮತ್ತೊಂದು ಅನಂತತೆಯದು. ಇವೆರಡಕ್ಕೂ ಇರುವ ಭೇದ ಗುಣಸಂಬಂಧವಾದದ್ದು, ಪರಿಮಾಣಾತ್ಮಕವಲ್ಲ. ಕಾಲದ ಪರಿಮಾಣವನ್ನು ಕೊನೆಯಿಲ್ಲದೆ ಹೆಚ್ಚಿಸುವುದರಿಂದ ಅನಂತತೆ ಅಥವ ನಿತ್ಯತೆ ಪ್ರಾಪ್ತವಾಗುವುದಿಲ್ಲ. "ನಾಸ್ತಿ ಅಕೃತಃ ಕೃತೇನ" ಎಂದು ಉಪನಿಷತ್ತು ಹೇಳುತ್ತದೆ. ಕಾಲದ ಪರಿಮಿತಿಯಲ್ಲಿ ಪಡೆದ ಯಾವ ಅನುಭವವೂ ಕಾಲಾತೀತವಾದುದರ ಅನುಭವವನ್ನು ತಂದು ಕೊಡಲಾರದು. ಕಾಲತತ್ತ್ವವನ್ನು ಮೀರಿದ ಮತ್ತೊಂದು ಸತ್ಯದ ಸ್ಥಿತಿಗೆ ನಮ್ಮ ಮನಸ್ಸು ಏರಬೇಕಾಗುತ್ತದೆ.

ಆಧ್ಯಾತ್ಮ ಜೀವನದಲ್ಲಿ ಪ್ರಾರ್ಥನೆ, ಪ್ರತ್ಯಾಹಾರ, ಧ್ಯಾನ ಇವುಗಳಿಗೆ ಇರುವ ಸ್ಥಾನವನ್ನು ಕುರಿತು ಯೋಗಸೂತ್ರ ವಿಸ್ತಾರವಾದ ವಿವರಣೆಯನ್ನು ಕೊಡುತ್ತದೆ.

ಭಾರತದ ಮತಧರ್ಮಗಳ ಇತಿಹಾಸದುದ್ದಕ್ಕೂ ಹಿಂದೂ ಧರ್ಮ, ಬೌದ್ಧ, ಜೈನ, ಸಿಕ್, ಕ್ರೈಸ್ತ, ಮತ್ತು ಇಸ್ಲಾಂ ಧರ್ಮಗಳಲ್ಲೆಲ್ಲಾ ಜೀವನದ ಪುನರ್ನಿರ್ಮಾಣವನ್ನೇ ಕುರಿತು ಒತ್ತಿ ಹೇಳಿವೆ. ಇದು ನಾಮರೂಪಗಳನ್ನು ದಾಟಿದ, ಸಗುಣೇಶ್ವರನ ಉಪಾಸನೆಯನ್ನು ಮೀರಿದ, ಜ್ಞಾತೃಜ್ಞೇಯ ವಿಭಾಗವನ್ನು ಅಳಿದ ಅಲೌಕಿಕ ಪ್ರಜ್ಞೆ. ಇಂದಿಗೂ ಅನೇಕ ಧರ್ಮನಿಷ್ಠರು ಈ ಜ್ಞಾತೃಜ್ಞೇಯ ವಿಭಾಗವನ್ನು ಮೀರಿದ ಅಸಂಪ್ರಜ್ಞಾತ ಸಮಾಧಿಯನ್ನೇ ಗುರಿಯಾಗಿಟ್ಟುಕೊಂಡಿದ್ದಾರೆ. ಈ ಸಮಾಧಿಸ್ಥಿತಿಯ ಆನಂದದ ಅನುಭವದಲ್ಲಿ ಪ್ರತ್ಯಗಾತ್ಮನು ಪರಮಾತ್ಮನಲ್ಲಿ ಲೀನವಾಗಿ ತನ್ನ ಆಕಾಂಕ್ಷೆಯ ಸಿದ್ಧಿಯನ್ನು ಪಡೆದು ತೃಪ್ತನಾಗುತ್ತಾನೆ, ಪುನೀತನಾಗುತ್ತಾನೆ.

## ೨. ಟಾವೋ-ಧರ್ಮ (Taoism)

ಕ್ರಿ.ಪೂ. ೬ ನೇ ಶತಮಾನದ ಲಾ-ವ್ಹೊ-ಸೆ (Lao-Tse) ಗಿಂತಲೂ ಪೂರ್ವದಲ್ಲಿ ಚೀನೀಯರು ಪರತತ್ತ್ವವನ್ನು ಟಾವೋ ಎಂದು ಕರೆದಿದ್ದರು. ಇದು ಅವರ ಸ್ವರ್ಗದ ಕಲ್ಪನೆಗಿಂತಲೂ ಪ್ರಾಚೀನ, ಉತ್ಕೃಷ್ಟ. ಕಾಲದ ಆದಿಗೂ ಹಿಂದೆ, ಸಾಕಾರ ಈಶ್ವರ ಕಲ್ಪನೆಗೂ ಪೂರ್ವದಲ್ಲಿ, ಇದ್ದದ್ದು.

ಟಾವೋ ನಿತ್ಯವೂ ಅಚಲವೂ ಸರ್ವವ್ಯಾಪಕವೂ ಆದ ತತ್ವ. ಮಿಕ್ಕೆಲ್ಲವೂ ಇದರಿಂದ ಹೊರಹೊಮ್ಮಿದವು. ಇದು ಎಲ್ಲದರ ಆದಿಕಾರಣ. ಸೃಷ್ಟಿಕರ್ತನೂ, ಸೃಷ್ಟ ಜಗತ್ತೂ ಇದರ ವ್ಯಕ್ತಸ್ವರೂಪ. ಪ್ರಕೃತಿಯಲ್ಲಿ ಎಲ್ಲವೂ ವ್ಯವಸ್ಥಿತವಾಗಿರುವ, ನಿಯಮಿತವಾಗಿರುವ ಮಹಾತತ್ತ್ವದ ಮೂಲ ಇದು. ಟಾವೋ ಎಲ್ಲದರ ಉಗಮಸ್ಥಾನ, ಎಲ್ಲವೂ ಧಾವಿಸುವ ಗುರಿ.

ಈ ತತ್ತ್ವವನ್ನು ವಿವರಿಸಲು ಯಾವ ಹೆಸರೂ ಸಮರ್ಪಕವಾಗಿಲ್ಲ. ಇದು ಟಾವೋ ಅಥವ ಮಾರ್ಗ. ಇದರ ವಿಷಯದಲ್ಲಿ ನೇತಿ ನೇತಿ ಎಂದು ಹೇಳುವುದು ಮಾತ್ರ ಸಾಧ್ಯ. ಇದು ವರ್ಣರಹಿತ, ಶಬ್ದರಹಿತ, ಅಪ್ರಾಕೃತ. ಟಾವೋ ತತ್ವದಿಂದ ವಿಶ್ವದ ಉಪಾದಾನ ಕಾರಣವಾದ ಮಹಾಶಕ್ತಿ ಉದಯಿಸುತ್ತದೆ. ಈ ಏಕಶಕ್ತಿಯಿಂದ ದ್ವೈತತತ್ತ್ವ ಉದ್ಭವಿಸುತ್ತದೆ. ಒಂದು "ಯಾಂಗ್" ಮತ್ತೊಂದು "ಯಿನ್", ಒಂದು ಪುರುಷ ಮತ್ತೊಂದು ಪ್ರಕೃತಿ. ಒಂದು ಬೆಳಕು ಮತ್ತೊಂದು ನೆರಳು. ಇವೆರಡರಿಂದ ಹುಟ್ಟಿದ ಸ್ವರ್ಗ, ಮರ್ತ್ಯ, ಮಾನವ ಇವುಗಳ ಪರಸ್ಪರ ಸಮ್ಮಿಳನದ ಕಾರಣವಾಗಿಯೇ ಎಲ್ಲ ಜೀವಜಂತುಗಳು ಉದ್ಭವವಾಗುತ್ತವೆ.

ಟಾವೊ ಮಾನವನಲ್ಲಿ ಅಂತರ್ಗತವಾಗಿದೆ. ಆತ್ಮಶಾಂತಿಯನ್ನು ಸಂಪಾದಿಸಲು ಟಾವೋ ಅನ್ವೇಷಣೆಗೆ ನಾವು ಹೊರಡಬೇಕು. ಅದರೊಡನೆ ತಾದಾತ್ಮ್ಯವನ್ನು ಪಡೆಯುವುದು ಮತ್ತು ಅದರ ಅಪ್ರತಿಹತ ವಾಹನವಾಗುವುದು ಟಾವೋ ಪಂಥದ ಗುರಿ. ಸಾಮಾನ್ಯ ಪ್ರಪಂಚದ ಕಟ್ಟುಕಟ್ಟಳೆಗಳ ನಿಯಮನಿಬಂಧನೆಗಳ ಬಂಧನದಿಂದ ಪಾರಾಗುತ್ತೇವೆ. ಈ ಐಕ್ಯದ ಸ್ಥಿತಿಯಲ್ಲಿ ಶಾಂತಿ ಪಡೆಯುತ್ತೇವೆ. ಸೇಸಿಯಾ (Tse-Hsia) ಹೀಗೆ ಹೇಳುತ್ತಾನೆ. "ಟಾವೋದೊಡನೆ ಸಮರಸಗೊಂಡವನು ಎಲ್ಲ ಬಾಹ್ಯ ವಸ್ತುಗಳೊಡನೆಯೂ ಸಮರಸಗೊಳ್ಳುತ್ತಾನೆ."

ನಿಜವಾದ ಸದ್ಗುಣ ಅಂತರಂಗದಲ್ಲಿನ ಟಾವೋವಿನ ಸ್ವತಂತ್ರ ಅಭಿವ್ಯಕ್ತಿ. ಹೊರಗಿನ ನೀತಿ ನಿಬಂಧನೆಗಳ ಕೃತಕ ಅನುಸರಣೆಯಲ್ಲ. ಟಾವೋ ಎಂಬ ಬೇರು ಇದ್ದರೆ ಸದ್ಗುಣ ಎಂಬ ಪುಷ್ಪಗಳು ತಾವೇ ತಾವಾಗಿ ಅರಳುವುವು.

ಟಾವೋ ಎಲ್ಲದರಲ್ಲಿಯೂ ಸುಪ್ತವಾಗಿದೆ. ಆದುದರಿಂದ ಎಲ್ಲರನ್ನೂ

ಅನುಕಂಪದಿಂದ ಆದರಿಸಬೇಕು. "ಒಳ್ಳೆಯವರಿಗೆ ನಾನು ಒಳ್ಳೆಯವನಾಗಿರಲು ಬಯಸುತ್ತೇನೆ; ಒಳ್ಳೆಯವರಲ್ಲದವರಿಗೂ ಒಳ್ಳೆಯವನಾಗಿಯೇ ಇರಲು ಬಯಸುತ್ತೇನೆ. ಏಕೆಂದರೆ ಅವರನ್ನೂ ಒಳ್ಳೆಯವರನ್ನಾಗಿಸುವ ಸಲುವಾಗಿ."

ಜೆನ್ ಬೌದ್ಧ ಧರ್ಮದಲ್ಲಿ (Zen Buddhism) ಧ್ಯಾನಕ್ಕೆ ತುಂಬ ಪ್ರಾಶಸ್ತ್ಯವಿದೆ. ಚೀನಾದ ಟಾವೋ ಮತ್ತು ಬೌದ್ಧ ಧರ್ಮಗಳಲ್ಲಿ ಪರಂಪರಾನುಗತವಾಗಿ ಅನೇಕ ಅನುಭಾವಿಗಳು ಆಗಿಹೋಗಿದ್ದಾರೆ.

## ೩. ಯಹೂದ್ಯಧರ್ಮ (Judaism)

ಹೀಬ್ರೂ ಜನಕ್ಕೆ ಪ್ರವಾದಿಗಳ ಬೋಧೆಯಲ್ಲಿ ದೇವರ ವಾಣಿ ಕೇಳಬರುತ್ತದೆ. ಶ್ರುತಿ ವಾಕ್ಯಗಳು ಸ್ವಾನುಭವದಲ್ಲಿ ಜೀವಂತವಾಗುತ್ತವೆ. ಪರ್ವತದ ಮೇಲೆ ದೇವರೊಡನೆ ತನ್ಮಯನಾದ ಮೋಸಸ್ ಮತ್ತು ಗುಹೆಯಲ್ಲಿ ಸಿದ್ಧಿಪಡೆದ ಎಲಿಜ್ಜ (Elijah) ಇನರು ಇದಕ್ಕೆ ದೃಷ್ಟಾಂತಗಳು. ಎಕ್ಸೋಡಸ್ ಎಂಬ ಗ್ರಂಥದ ಮೂರನೇ ಅಧ್ಯಾಯದಲ್ಲಿ ದೇವರೋ ದೇವರ ದೂತನೋ ಮೋಸಸ್‌ಗೆ ಕಾಣಿಸಿಕೊಂಡನೆಂದು ಹೇಳಿದೆ. "ಒಂದು ಪೊದೆಯ ಮಧ್ಯದಿಂದ ಒಂದು ಜ್ಯೋತಿಯು ಕಾಣಿಸಿಕೊಂಡಿತು. ಅವನು ನೋಡುತ್ತಿದ್ದ ಹಾಗೆಯೇ ಅದು ಒಂದು ದೊಡ್ಡ ಜ್ವಾಲೆಯಾಯಿತು. ಆದರೆ ಪೊದೆ ಉರಿದುಹೋಗಲಿಲ್ಲ. ಕುತೂಹಲಿ ಮೋಸಸ್ ಈ ಆಶ್ಚರ್ಯಕರ ದೃಶ್ಯವನ್ನು ಪಕ್ಕಕ್ಕೆ ತಿರುಗಿ ನೋಡಿದ. ಆ ಪೊದೆಯ ಮಧ್ಯದಿಂದ ದೇವರು ಅವನನ್ನು ಕರೆದು ಹತ್ತಿರ ಬರಬೇಡ, ನಿನ್ನ ಪಾದರಕ್ಷೆಯನ್ನು ತೆಗೆ, ಏಕೆಂದರೆ ನೀನು ನಿಂತಿರುವ ಸ್ಥಳ ಪವಿತ್ರಕ್ಷೇತ್ರ ಎಂದನು. ಮೋಸಸ್ ದೇವರನ್ನು ದಿಟ್ಟಿಸಿ ನೋಡಲು ಅಂಜಿ ಮುಖವನ್ನು ಮುಚ್ಚಿಕೊಂಡ....". ಇಸ್ಸಾಯನು ಕಂಡ "ದೇಗುಲವನ್ನೆಲ್ಲಾ ತುಂಬಿಬಂದ" ಭಗವತ್ ದರ್ಶನ ಭಗವದ್ಗೀತೆಯ ವಿಶ್ವರೂಪದರ್ಶನವನ್ನು ನಮ್ಮ ಸ್ಮರಣೆಗೆ ತರುತ್ತದೆ. ಇಡೀ ವಿಶ್ವವು ಬ್ರಹ್ಮನ ಅಖಂಡ ದಿವ್ಯದರ್ಶನ. ಈಶ್ವರನಿಗಾಗಿ ಹಾತೊರೆಯುವ ಮಾನವ ಚೇತನದ ತಣಿಯಲಾರದ ಆಕಾಂಕ್ಷೆ ಸಾಮಿಸ್ಟ್ (Psalmist) ಸ್ತೋತ್ರಕಾರನ ಈ ಮಾತುಗಳಲ್ಲಿ ವ್ಯಕ್ತವಾಗುತ್ತದೆ. "ನನಗೆ ನೀನಲ್ಲದೆ

ಸ್ವರ್ಗದಲ್ಲಿ ಮತ್ತೆಯಾರಿದ್ದಾರೆ? ಈ ಪೃಥ್ವಿಯಲ್ಲೂ ನಾನು ಬಯಸುವುದು ನಿನ್ನನ್ನು ಹೊರತು ಮತ್ತಾವುದನ್ನೂ ಅಲ್ಲ." "ಹೌದು, ಅಚ್ಯುತ ಪ್ರೇಮದಿಂದ ನಿನ್ನನ್ನು ಪ್ರೀತಿಸಿದ್ದೇನೆ, ಆದ್ದರಿಂದ ಪ್ರೇಮಮಯ ಅನುಕಂಪದಿಂದ ನಿನ್ನನ್ನು ನನ್ನ ಬಳಿಗೆ ಸೆಳೆದುಕೊಂಡಿದ್ದೇನೆ."

ರೆಬಿನಿಕ್ ಅನುಭಾವ ಮಾರ್ಗ (Rabbinic Mysticism) ಮಧ್ಯಯುಗದ ಕಬ್ಬಾಲಪಂಥಕ್ಕೆ ಕಾರಣವಾಯಿತು. ಆ ಪಂಥದ ಸುಪ್ರಸಿದ್ಧ ಕೈಪಿಡಿ "ಜೋಹಾರ್" ಎಂಬ ಗ್ರಂಥ. ಅದರ ಪ್ರಕಾರ ಈ ಜಗತ್ತು ಈಶ್ವರನ ಶರೀರ; ಈಶ್ವರ ನಿರ್ಗುಣ; ಅನನನ್ನು ನಕಾರಾತ್ಮಕವಾಗಿ ಮಾತ್ರ ವರ್ಣಿಸಬಹುದು. ಜಗತ್ತು ಈಶ್ವರನೊಡನೆ ಸಂಪರ್ಕ ಪಡೆಯುವುದು ದಶರೂಪ ತತ್ತ್ವಗಳ ಮೂಲಕ ಮಾತ್ರ ಸಾಧ್ಯ. ಎಲ್ಲವನ್ನೂ ಒಳಗೊಂಡಿದ್ದರೂ ವಿಶ್ಲೇಷಣಕ್ಕೆ ಅತೀತವಾದ ಏಕರೂಪತೆ ಇದರ ಪ್ರಥಮ ಆವಿಷ್ಕಾರ. ಇದು ಈಶ್ವರನಿಂದ ಹೊಮ್ಮಿದ ಆದ್ಯ ಸಂಕಲ್ಪ. ಈ ಸಂಕಲ್ಪದಲ್ಲಿ ವಿಸ್ತಾರವಾದ ವೈವಿಧ್ಯಪೂರ್ಣವಾದ ಈ ಜಗತ್ತಿನ ಯೋಜನೆ ಅಡಕವಾಗಿದೆ. ಎರಡು ಮತ್ತು ಮೂರನೆಯ ಆವಿರ್ಭಾವಗಳು ಪ್ರಜ್ಞೆ ಮತ್ತು ಬುದ್ಧಿ. ಎಲ್ಲವಕ್ಕೂ ರೂಪನೀಡುವ ಎಲ್ಲದರ ಪರಿಮಾಣವನ್ನೂ ನಿಯಮಿಸುವ ಸೃಷ್ಟಿಕಾರಣವಾದ ಪುರುಷ ಶಕ್ತಿಯಾದ ಪ್ರಜ್ಞೆಯೇ ತಂದೆ. ಬುದ್ಧಿಶಕ್ತಿ ತಾಯಿಯಂತೆ ನಿಷ್ಕ್ರಿಯವಾದ ಧಾರಣಾ ತತ್ತ್ವ. ಇವೆರಡರ ಸಂಯೋಗದಿಂದ ಮತಿ ಎಂಬ ಕುಮಾರ ಹುಟ್ಟುತ್ತಾನೆ. ಇವನಲ್ಲಿ ತಾಯಿ ತಂದೆಗಳ ಅಂಶಗಳೆರಡೂ ಸಮಾವೇಶಗೊಂಡಿರುತ್ತವೆ. ದಯೆ, ಧರ್ಮ, ಸೌಂದರ್ಯ, ವಿಜಯ, ತೇಜಸ್ಸು, ಪ್ರತಿಷ್ಠೆ ಮತ್ತು ರಾಜ್ಯಶ್ರೀ ಇವುಗಳು ಇನ್ನುಳಿದ ಸಪ್ತ ತತ್ತ್ವಗಳು. ಜೋಹಾರ್ ಗ್ರಂಥ ಪ್ರಾರ್ಥನೆಯ ಗಂಭೀರವಾದ ಪರಮಾರ್ಥವನ್ನು ಒತ್ತಿ ಹೇಳಿ ಭೌತಪ್ರಪಂಚದಲ್ಲಿ ಅದು ಎಂತಹ ಪರಿಣಾಮಕಾರೀ ಶಕ್ತಿ ಎಂಬುದನ್ನು ವಿವರಿಸುತ್ತದೆ. ಮಧ್ಯಕಾಲದ ಯಹೂದ್ಯಸಿದ್ಧಾಂತದ ಪ್ರಮುಖ ಆಚಾರ್ಯನಾದ ಮೈಮೊನಿಡಿಸ್ (Maimonidcs) ನಕಾರಾತ್ಮಕ ಪಂಥವನ್ನು ಎತ್ತಿ ಹಿಡಿಯುತ್ತಾನೆ. ಸ್ಪಿನೋಜನ ಎಥಿಕ್ಸ್ ಎಂಬ ಗ್ರಂಥ ಮತಧರ್ಮನಿಷ್ಠೆಗೆ ಬಹು ಮುಖ್ಯವಾದುದು.

## ೪. ಗ್ರೀಕ್ ಮತಧರ್ಮ

ಪ್ರಾಚೀನ ಗ್ರೀಕ್ ಮತಧರ್ಮದಲ್ಲಿ ಎರಡು ವಿಚಾರ ಪ್ರವಾಹಗಳಿವೆ; ಒಂದು ಹೋಮರಿಕ (Homeric) ಮತ್ತೊಂದು ಅನುಭಾವಿಕ (Mystic).

ಪ್ಲೇಟೋವಿನಲ್ಲಿ ಮತ್ತು ಪ್ಲೋಟೈನಸ್‌ನಲ್ಲಿ ಇವೆರಡು ಪ್ರವಾಹಗಳೂ ಸಂಗಮವಾಗಿವೆ. ಪ್ಲೇಟೋವಿಗೆ ಜೀವನದ ಗುರಿ "ದೇವರಂತೆ ಆಗುವುದು." ನಿಜವಾದ ಧರ್ಮನಿಷ್ಠೆ ಎಂದರೆ ದೇವರೊಡನೆ ಸಹಕರ್ಮಿಯಾಗುವುದು. ಪಾಲ್‌ನ ಪತ್ರಗಳಲ್ಲಿ ಮತ್ತು ನಾಲ್ಕನೆಯ ಗಾಸ್ಪೆಲಿನಲ್ಲಿ ಮಂತ್ರದೀಕ್ಷೆ ಮತ್ತು ಧ್ಯಾನ ಸಂಬಂಧವಾದ ಮತಕರ್ಮಗಳ ಮೇಲೆ ಈ ರಹಸ್ಯ ಧರ್ಮದ ಪ್ರಭಾವವನ್ನು ಕಾಣುತ್ತೇವೆ. ಆರ್ಫಿಕ್ ಮತ್ತು ಎಲ್ಯೂಸಿನಿಯನ್ ರಹಸ್ಯ ಮತಗಳಲ್ಲಿ ನಾವು ಕಾಣುವ ಅನೇಕ ವಿಚಾರದ ಅಂಶಗಳು ಗ್ನಾಸ್ಟಿಕ್ ಪಂಥಗಳಲ್ಲಿ ಸಮಾವೇಶವಾಗಿವೆ.

ಪ್ಲೋಟೈನಸ್ (ಕ್ರಿ. ಶ. ೨೦೪-೨೭೦) ತನ್ನ ಸಿದ್ಧಾಂತ ಹೊಚ್ಚ ಹೊಸತೇನೂ ಅಲ್ಲವೆಂದು ಹೇಳುತ್ತಾನೆ. "ಈ ಸಿದ್ಧಾಂತ ಹೊಸದಲ್ಲ ಪ್ರಾಚೀನ ಕಾಲದಿಂದಲೂ ಅಂಗೀಕರಿಸಲ್ಪಟ್ಟಿರುತ್ತದೆ. ಸ್ಪಷ್ಟವಾಗಿ ಇದನ್ನು ಬೆಳೆಸಲಿಲ್ಲವೆಂದು ಮಾತ್ರ ಹೇಳಬಹುದು. ನಾವು ಪ್ರಾಚೀನ ಋಷಿಗಳ ವ್ಯಾಖ್ಯಾನಕಾರರು ಮಾತ್ರ. ಪ್ಲೇಟೋವಿನ ಸಾಕ್ಷ್ಯದಿಂದ ನಮ್ಮ ಅಭಿಪ್ರಾಯಗಳೇ ಅವರದೂ ಆಗಿತ್ತು ಎಂದು ತೋರಿಸುವುದು ನಮ್ಮ ಇಷ್ಟ." ಪಾರ್ಫಿರಿ ಅವನೊಡನೆ ಇದ್ದ ಕಾಲದಲ್ಲಿ, ಪ್ಲೋಟೈನಸ್ ನಾಲ್ಕುಸಲ ದೇವರ ಸಾಕ್ಷಾತ್ಕಾರವನ್ನು ಪಡೆದಿದ್ದನೆಂದು ಹೇಳುತ್ತಾನೆ. ಅವನ ಸ್ನೇಹಿತನಾದ ಯೂಸ್ಟೋಕಿಯಸ್ ಎಂಬ ವೈದ್ಯ "ಆತ್ಮತತ್ವ ವಿಶ್ವದ ಆತ್ಮತತ್ವದೊಡನೆ ವಿಲೀನವಾಗಲು ನನ್ನ ದೇಹವನ್ನು ತ್ಯಜಿಸುವ ಮುನ್ನ ನಾನು ನಿನಗಾಗಿ ಕಾದಿದ್ದೆ." ಎಂಬ ಅವನ ಕೊನೆಯ ಮಾತುಗಳನ್ನು ಕೇಳಿದ.

ಪರ ಎಂಬುದು ಇರುವ ಎಲ್ಲವನ್ನೂ ಎಲ್ಲ ಜೀವರಾಶಿಯನ್ನೂ ಮೀರಿ ನಿಂತಿದೆ. ಅದು ಸಂತತ ಜಾಗ್ರತ ಸ್ಥಿತಿಯಲ್ಲಿರುತ್ತದೆ. ಅದು ಶುಭವಾದುದು ಅಶುಭವಾದುದು ಅನ್ನುವ ಹಾಗಿಲ್ಲ, ಅದೇ ಪರಿಪೂರ್ಣತೆ. ಅದೇ ಸೌಂದರ್ಯ, ಸೌಂದರ್ಯಹೊಂದಿದ್ದು ಎಂದಲ್ಲ. ಪ್ಲೋಟೈನಸ್, ದೇವತ್ವಕ್ಕೂ ದೇವರಿಗೂ ವ್ಯತ್ಯಾಸವಿದೆ ಎಂದ. ನಾವು ಪೂಜಿಸುವ ದೇವರೇ ಪ್ರತಿ,

ಶ್ರುತಿನೀಡುವವನಲ್ಲ. ಶ್ರುತಿಯ ಮೂಲವನ್ನು ಶ್ರುತಿಯೇ ಹೇಳಲಾರದು. ನಮ್ಮ ಬುದ್ಧಿಯ ಗುರಿ, ನಮ್ಮ ಸಂಕಲ್ಪದ ಗುರಿ ಶೀಲ. ನಮ್ಮ ಪ್ರೇಮದ ಆರಾಧನೆಯ ಗುರಿ ಸೌಂದರ್ಯ. W.R. ಇಂಗ್ ಹೇಳುವಂತೆ: "ಬ್ರಹ್ಮನೊಬ್ಬ ಇರಲೇಬೇಕು"—ಇದು ತರ್ಕದ ನಿಗಮನ; "ಅದು ಇರಬೇಕಾದಂತೆ ಇರಬೇಕು"—ಇದು ನೀತಿ ಶಾಸ್ತ್ರದ ನಿಗಮನ; "ಅದು ಇದೆ"—ಇದು ಪ್ರೇಮದಿಂದ ನಮ್ಮ ಆತ್ಮ ಕಂಡುಕೊಂಡದ್ದು." ನಾವು ನಮ್ಮ ಅಂತರ್ಯದಲ್ಲಿ ಬ್ರಹ್ಮರೇ ಆಗಿರುವುದರಿಂದ ನಮಗೆ ಬ್ರಹ್ಮನನ್ನು ಅರಿಯಲು ಸಾಧ್ಯವಾಗುತ್ತದೆ. ಈ ಪರತತ್ವದ ದರ್ಶನ ನಮಗೆ ತರ್ಕದಿಂದ ಆಗುವುದಿಲ್ಲ. ಯಾವುದೋ ಆಧ್ಯಾತ್ಮಿಕ ಸ್ಪರ್ಶದಿಂದ ಆದೀತು. ಇದರ ವಿಷಯವಾಗಿ ಅನಂತರ ನಾವು ತರ್ಕಿಸಬಹುದು. ಆದರೆ ದರ್ಶನವಾಗುವ ಸಮಯದಲ್ಲಿ ಸಾಧ್ಯವಿಲ್ಲ." ಆತ್ಮನಲ್ಲಿ ಮಿಂಚಿನಂತೆ ಬೆಳಕು ಹೊಳೆದಾಗ, ಅದರ ದರ್ಶನವಾಯಿತೆಂದು ನಾವು ನಂಬಬೇಕು. ಯಾರು ಅವನನ್ನು ಕರೆಯುತ್ತಾರೋ, ಅವರ ಮನೆಗೆ ದೇವರು, ಅತಿಥಿಯಾಗಿ ಬರುತ್ತಾನೆ. ಬೆಳಕು ನೀಡುತ್ತಾನೆ. ಇದು ಆತ್ಮನ ನಿಜವಾದ ಪುರುಷಾರ್ಥ. ಆ ಬೆಳಕಿನ ಅನುಭವವಾದಾಗ, ಅದರ ಮೂಲಕವೇ ಎಲ್ಲವನ್ನೂ ನೋಡುವುದು. ಬೇರಾವ ಬೆಳಕಿನಿಂದಲೂ ಅಲ್ಲ. "ಸೂರ್ಯನ ಬೆಳಕಿನಿಂದ ಸೂರ್ಯನನ್ನು ನೋಡುವಂತೆ." ಈ ಆನಂದಮಯ ಸ್ಥಿತಿ ಬಹು ಅಪೂರ್ವ. ಅದು ಆಧ್ಯಾತ್ಮಿಕ ಸಾಧನೆಯ ಉತ್ತುಂಗ ಶಿಖರ. ಪಾರ್ಫಿರಿ, ಅಯಾಂಬ್ಲಿಕಸ್, ಪ್ರಾಕ್ಲಸ್ ಎಂಬುವರು ಪ್ಲೋಟೈನಸ್ ತರುವಾಯ ನವ್ಯ-ಪ್ಲೇಟೋ ಸಿದ್ಧಾಂತವನ್ನು ಬೆಳೆಸಿದರು.

## ೫. ಜರತುಷ್ಟ್ರನ ಮತ

ಜರತುಷ್ಟ್ರನ ಮತಾನುಯಾಯಿಗಳು ಅತ್ಯಲ್ಪ. ಆದರೆ ಜರತುಷ್ಟ್ರನ ಗಾಥಾಗಳಲ್ಲಿ ಅಡಗಿರುವ ವಿಚಾರಗಳು ಗಂಭೀರ, ವಿಶ್ವವ್ಯಾಪಕ. ಮಾನವ ಲೋಕ ಪಾಪದಿಂದ ಬಿಡುಗಡೆ ಹೊಂದುವ ಸಲುವಾಗಿ ಮಾಡಿಕೊಂಡ ಪ್ರಾರ್ಥನೆಯ ಫಲವಾಗಿ ಜರತುಷ್ಟ್ರ ಹುಟ್ಟಿದನೆಂದು ಹೇಳಿದೆ. ಅಹುರ ಮಜ್ದಾ ಹೀಗೆ ಹೇಳುತ್ತಾನೆ. "ಅವನೊಬ್ಬನೇ ದೇವರ ಆಜ್ಞೆಗಳೆಲ್ಲವನ್ನೂ ನೆರವೇರಿಸಿದವನು". ಅಹುರ ಮಜ್ದನ ಕಟ್ಟಳೆಗಳನ್ನು ಕುರಿತು ಜರ

ತುಷ್ಟ್ರ ಚಿಂತಿಸುತ್ತಿದ್ದಾಗ ಹೀಗೆಂದು ಹೇಳಿದೆ. 'ಆಂಗ್ರೋಮೈನ್ಯು ಎಂಬ ದುಷ್ಟಶಕ್ತಿ ಅವನ ಬಳಿ ಸಾರಿ.–ಅಹುರ ಮಜ್ದನಲ್ಲಿ ನಂಬಿಕೆಯನ್ನು ಬಿಟ್ಟರೆ ಇಹಲೋಕದ ಸಾಮ್ರಾಜ್ಯವನ್ನೆಲ್ಲಾ ಕೊಡುವೆನೆಂದು ಆಸೆ ತೋರಿಸುತ್ತಾನೆ. ಆಗ 'ಅಹುರ ವೈರ್ಯ' ಎಂಬ ಪ್ರಖ್ಯಾತವಾದ ಶ್ಲೋಕವನ್ನು ಪಠಿಸಿದ ತಕ್ಷಣ ಪಾಪಾತ್ಮನು ಓಡಿಹೋಗುತ್ತಾನೆ.' ಅಸತ್ಯವನ್ನು ಬಿಟ್ಟು ಸತ್ಯವನ್ನು ಅರಸಲು, ಪಾಪವನ್ನು ಬಿಟ್ಟು ಪುಣ್ಯವನ್ನು ಅರಸಲು ಜರತುಷ್ಟ್ರ ದೃಢಸಂಕಲ್ಪ ಮಾಡಿದಾಗ ಅವನ ಅಂತರ್ಯದಲ್ಲಿ ಸಂಭವಿಸಿದ ಧರ್ಮ ಸಂಕಲ್ಪದ ಕಥೆ ಇದು. ಈ ಪಾಪ ಪುಣ್ಯದ್ವಂದ್ವ ನಮ್ಮ ಸ್ವಭಾವದಲ್ಲಿಯೇ ಇದೆ. ದುಷ್ಟ ಶಕ್ತಿಗಳು ಮನುಷ್ಯನ ಒಳಗೇ ಇವೆ ಹೊರಗಲ್ಲ. ಮನುಷ್ಯನನ್ನು ಯಾವುದೋ ದುಷ್ಟಪಿಶಾಚಿ ಹಿಡಿದಿದೆ ಎಂದು ಹೇಳಿದಾಗ ಅದರ ಅರ್ಥ ಅವನು ತನ್ನ ಪಾಪಪ್ರವೃತ್ತಿಗಳಿಗೆ ಮತ್ತು ಪಾಪವಿಚಾರಗಳಿಗೆ ಅಧೀನನಾಗಿದ್ದಾನೆಂದು. ಈ ಶಕ್ತಿಗಳಿಗೆ ಶರಣಾಗುವುದರಿಂದ ಅವನ ಪ್ರಗತಿ ಕುಂಠಿತವಾಗುತ್ತದೆ. ದುಷ್ಟಪ್ರವೃತ್ತಿಗಳಾದ ಮಾತ್ಸರ್ಯ, ಅಹಂಕಾರ, ಅವಿದ್ಯೆ ಎಂದರೆ ಹೊರಗೆ ತೋರುವುದೇ ಸತ್ಯವೆಂದು ಭ್ರಮಿಸುವುದು, ಇವನ್ನೆಲ್ಲಾ ಒಟ್ಟಿಗೆ ಸೈತಾನ ಅಥವ 'ಪಾಪಾತ್ಮ' ಎಂದು ಸಂಭೋಧಿಸಿದೆ. ಜರತುಷ್ಟ್ರ ಈ ಪಾಪಾತ್ಮನನ್ನು ಪರಾಜಯಗೊಳಿಸಿದ ಅಂದರೆ ಈ ದುಷ್ಟ ಶಕ್ತಿಗಳಿಗೆ ಅವನು ಶರಣಾಗಲಿಲ್ಲ ಎಂದರ್ಥ. ಮಾನವ ತನ್ನ ಆತ್ಮ ಪೌರುಷದಿಂದ ತನ್ನ ಭವಿತವ್ಯತೆಯನ್ನು ರೂಪಿಸಿಕೊಳ್ಳಬಲ್ಲನೆಂಬುದಕ್ಕೆ ಅವನ ಕೃತಿಯೇ ಸಾಕ್ಷಿ. ಹಳೆಯ ಒಡಂಬಡಿಕೆಯ (Old Testament) ಕೊನೆಯ ಪುಸ್ತಕಗಳಲ್ಲಿ ಈ ಪಾಪಾತ್ಮನನ್ನು ಸೈತಾನನೆಂದು ಕರೆದಿದೆ. ಇದಕ್ಕೂ ಮತ್ತು ಕೊನೆಯ ಭಾಗದ ಅವೆಸ್ತಾವಿಗೂ ಬಹುಮಟ್ಟಿನ ಸಾದೃಶ್ಯವಿದೆ.

ಅಹುರ ಮಜ್ದ ಪರದೇವತೆ, ಚಿದಚಿದ್ವಿಶಿಷ್ಟ ಜಗತ್ತಿಗೆ ಒಡೆಯ, ಪುರುಷ ಪ್ರಕೃತಿಗಳನ್ನು ಸೃಷ್ಟಿಸಿದ ಈಶ್ವರ. ಪಿತೃ ಪ್ರಯುಕ್ತವಾದ ಮೂರು ಕಿರಣಗಳು, ಮಾತೃ ಪ್ರಯುಕ್ತವಾದ ಮೂರು ಕಿರಣಗಳು ಇವೆರಡೂ ಸೇರಿ ಆರು ಪವಿತ್ರ ನಿತ್ಯವಸ್ತುಗಳಿವೆ. ಇವು ಪರಾತ್ಪರದಿಂದ ಉದ್ಭವಿಸಿದ ಅಂಶಗಳು ಅಥವಾ ವ್ಯೂಹಗಳು. ಸೃಷ್ಟಿರಚನೆಗೆ ಕಾರಣವಾದ ಈಶ್ವರ ಸಂಕಲ್ಪದ ಚಿಹ್ನೆ "ಅಷಾ" ಎಂಬುದು ಮೊದಲನೆ ಕಿರಣ, ಸತ್ಯಧರ್ಮ

ಗಳ ಪ್ರತೀಕ. ಎರಡನೆಯದು "ಬಹು-ಮನೋ" ಪರಾತ್ಪರನಲ್ಲಿ ಅನುರಕ್ತಿಯನ್ನು ಸೂಚಿಸುವ ಪ್ರತಿರೂಪ. ಮೂರನೆಯದು "ಕ್ಷತ್ರ". ಇದು ಪರವಸ್ತುವಿನ ಸೃಷ್ಟಿಕರ್ಮವನ್ನು ಸೂಚಿಸುವ ಚಿಹ್ನೆ. ನಾಲ್ಕನೆಯದು "ಆರ್ಮೈತಿ". ಇದು ಪರತತ್ತ್ವದ ಪ್ರೇಮ ಅನುಕಂಪಗಳ ಮಾತೃತ್ವ ಅಂಶವನ್ನು ಸೂಚಿಸುವ ಸಂಕೇತ. ಅದೇ ಅಂತರ್ಯಾಮಿಯಾದ ಆತ್ಮಶ್ರೀ ತತ್ತ್ವ. "ಹೌರ್ವತಾತ್" ಎಂಬುದು ಪ್ರತಿಯೊಬ್ಬ ಮಾನವನಲ್ಲಿಯೂ ನೆಲೆಸಿರುವ ಆದರ್ಶ, ಅಧ್ಯಾತ್ಮವೃದ್ಧಿ ತತ್ತ್ವ. ಕೊನೆಯದು "ಅಮೆರತತಾತ್" ಅಂದರೆ ಶಕ್ತಿಯನ್ನು ಕೊಡತಕ್ಕ ಅಮೃತತ್ವ ತತ್ತ್ವ. ಈ ಷಟ್‌ತತ್ತ್ವಗಳು ಪ್ರತ್ಯೇಕ ಘಟಕಗಳಲ್ಲ, ಈಶ್ವರ ಶರೀರದಲ್ಲಿನ ಅವಿನಾಭೂತವಾದ ಭಾಗಗಳು.

ಜರತುಷ್ಟ್ರ ಹೀಗೆ ಹೇಳುತ್ತಾನೆ "ದೇವರೊಡನೆ ಒಂದಾಗುವುದು ಅತ್ಯುತ್ಕೃಷ್ಟ ಧ್ಯೇಯ. ಅದನ್ನು ಹೊಂದಲು ಅಷಾ ನಮ್ಮ ಮಾರ್ಗ. ಈ ಅಷಾ ಮೂಲಕ ಮನಸ್ಸು, ಹೃದಯ ಮತ್ತು ಆತ್ಮಗಳ ಶುದ್ಧಿಯನ್ನು ಪಡೆಯುತ್ತೇವೆ. ಅಷಾ ಮೂಲಕ ನಿನ್ನದರ್ಶನವನ್ನು ಪಡೆಯುವಂತಾಗಲಿ. ನಿನ್ನ ಸಾನ್ನಿಧ್ಯವೊದಗಲಿ; ನಿನ್ನೊಡನೆ ಸಾಯುಜ್ಯ ದೊರಕಲಿ ; ಇರುವುದು ಒಂದೇ ಮಾರ್ಗ—ಅಷಾ ಮಾರ್ಗ—ಮಿಕ್ಕೆಲ್ಲವೂ ಮಿಥ್ಯಾ ಮಾರ್ಗಗಳು" (ಯಸ್ನ, 60,12,71,11)

ಅವೆಸ್ಥಾದ "**ಅಷಾ**"ಮತ್ತು ವೇದದ "**ಋತ**" ಇವೆರಡೂ ಒಂದೇ ಮಾತಿನ ಬೇರೆ ಬೇರೆ ರೂಪಕಗಳು. ಭಾರತದ ಆರ್ಯರೂ ಇರಾನಿನ ಆರ್ಯರೂ ಬೇರೆಯಾಗುವ ಮೊದಲೇ ಇವುಗಳ ಅಂತರಾರ್ಥ ಪುಷ್ಟವಾಗಿ ಬೆಳೆದಿತ್ತು. ಪರತತ್ತ್ವವಾದ ಅಹುರ-ಮಜ್ದ ತನ್ನ ಮನಸ್ಸಿನಿಂದ ಉದ್ಭವಿಸಿದ ಸ್ಥಾಯೀ ನಿಯಮಗಳ ಮೂಲಕ ವ್ಯಕ್ತಗೊಳ್ಳುತ್ತಾನೆ. ಇಡೀ ವಿಶ್ವವ್ಯಾಪಾರ ಅಷಾನಿಯಮದಂತೆ ಪೂರ್ಣತೆಯ ಕಡೆಗೆ ಸಾಗುತ್ತಿದೆ. ಯಾರು ಈ ಅಷಾ ಮಾರ್ಗದ ಪಾರಮಿತ ಪ್ರಜ್ಞೆಯನ್ನು ಅರ್ಥಮಾಡಿಕೊಂಡು ಅದರಂತೆ ನಡೆಯುತ್ತಾರೋ ಅವರೇ ಸಂತರು. ದೈವೀಪ್ರೇಮದಿಂದ ನಾವು ಕೈಗೊಂಡ ಕರ್ಮ ಮಾತ್ರ ಆನಂದದಾಯಕ, ಸ್ವಾರ್ಥಕ್ಕಾಗಿ ಕೈಗೊಂಡ ಕಾರ್ಯಗಳಲ್ಲ. ಮಾನವನು ತನ್ನ ಆಧ್ಯಾತ್ಮಿಕ ಕ್ಷೇಮವನ್ನು ಪಡೆಯಲು ಮತ್ತು ಲೋಕಹಿತ

ವನ್ನು ಸಾಧಿಸಲು ನಿಷ್ಕಾಮಕರ್ಮವೇ ಮಾರ್ಗ.

ಜರತುಷ್ಟ್ರನ ಧರ್ಮದಲ್ಲಿ ಪ್ರೇಮವೆಂಬುದು ಇಡೀ ಪ್ರಾಣಿಲೋಕವನ್ನು ಆವರಿಸಿದೆ. ಪ್ರತಿಯೊಂದು ತಿಂಗಳಲ್ಲಿಯೂ ನಾಲ್ಕುದಿನ (2,12, 14,21) ನಿಷ್ಠಾವಂತ ಜರತುಷ್ಟ್ರ ಧರ್ಮಿಗಳು ಮಾಂಸಾಹಾರ ಮಾಡುವುದಿಲ್ಲ. ಕೆಲವರು ವರ್ಷದ ಹನ್ನೊಂದನೆ ತಿಂಗಳು ಪೂರ್ತಿಯಾಗಿ ಮಾಂಸ ಸೇವಿಸುವುದಿಲ್ಲ. ತನ್ನ ಉಪದೇಶಗಳನ್ನು ಅನುಷ್ಠಾನ ಮಾಡುವವರಿಗೆ ಜರತುಷ್ಟ್ರ ಅಮೃತತ್ವದ ಭರವಸೆ ನೀಡುತ್ತಾನೆ. ಜಿಜ್ಞಾಸುಗಳಿಗೆ ರಹಸ್ಯವನ್ನು ನೀಡುತ್ತಾನೆ. ಪಾಪ ಪುಣ್ಯಗಳ ದ್ವಂದ್ವಯುದ್ಧ ಜಗದ್ವ್ಯಾಪಾರದ ಕೊನೆಯತನಕ ನಡೆದು ಪಾಪ ಶಕ್ತಿಗಳು ಸಂಪೂರ್ಣವಾಗಿ ನಾಶವಾಗುತ್ತವೆ. ಸರ್ವಶಕ್ತವಾದ ಧರ್ಮ ಸಂಸ್ಥಾಪನೆಯಾಗುತ್ತದೆ. ಜರತುಷ್ಟ್ರನಿಗೆ ಈ ಜಗತ್ತಿನ ಉದ್ಧಾರದ ಬಗ್ಗೆ ಅದರ ಮುಕ್ತಿಯ ಬಗ್ಗೆ ಪೂರ್ಣವಿಶ್ವಾಸ. ಪರಾತ್ಪರನಾದ ಅಹುರ–ಮುಜ್ದನನ್ನು ತಿಳಿಯುವುದಕ್ಕೂ ಅಷಾನಿಯಮದಂತೆ ನಡೆಯುವುದಕ್ಕೂ ಪ್ರಾರ್ಥನೆ ಮತ್ತು ಧ್ಯಾನಗಳಿಂದ ಆತ್ಮಶುದ್ಧಿ ಮಾಡಿಕೊಳ್ಳಬೇಕು. ಗುರಿಯನ್ನು ಮುಟ್ಟಿದಾಗ ನಮಗೆ ಶಾಂತಿ ಸಮಾವೇಶಗಳ ಸಾಕ್ಷಾತ್ಕಾರವಾಗುತ್ತದೆ.

## ೬. ಬೌದ್ಧ ಧರ್ಮ

ಬುದ್ಧ ತಾನೊಂದು ಹೊಚ್ಚ ಹೊಸ ಮಾರ್ಗವನ್ನು ಬೋಧಿಸಲು ಹೊರಟಿರುವೆನೆಂದು ಹೇಳಲಿಲ್ಲ. "ನಾನು ಪುರಾತನ ಮಾರ್ಗವನ್ನು ತಿಳಿದಿದ್ದೇನೆ; ಹಿಂದೆ ಪ್ರಾಜ್ಞರೂ ಪ್ರಬುದ್ಧರೂ ನಡೆದ ಹಳೆಯ ದಾರಿ; ಅದನ್ನೇ ನಾನು ಅನುಸರಿಸುತ್ತಿದ್ದೇನೆ". ಬೋಧಿ ಅಥವಾ ಜ್ಞಾನೋದಯವನ್ನು ಕುರಿತು ಬುದ್ಧ ಹೀಗೆ ಹೇಳುತ್ತಾನೆ. "ಅದು ಅಪರೋಕ್ಷವಾದ, ಅನಿರ್ವಚನೀಯವಾದ, ಅಂತರ್ಜ್ಞಾನೋಪಲಭ್ಯವಾದ ಪರಮಸತ್ಯದೊಡನೆ ಏರ್ಪಡುವ ಬಾಂಧವ್ಯ; ಕೇವಲ ತಾರ್ಕಿಕ ಜ್ಞಾನವಲ್ಲ. ಸತ್ ಸ್ವರೂಪದ ತಪೇಕಧ್ಯಾನದಿಂದ ಉಪಲಬ್ಧವಾಗಿ ತೃಷ್ಣೆಯ ಬೇರನ್ನು ಮೂಲೋತ್ಪಾಟನೆ ಮಾಡುವ ಜ್ಞಾನ. ಅವಧಾನ ಕ್ರಿಯೆಯ ಸೂಕ್ತ ಸ್ವರೂಪ, ಅಥವಾ 'ಯೋನಿಸೋ ಮನಸಿಕಾರ.'

ಸಂತತ ಗತಿಯ ಈ ಜಗತ್ತಿನಲ್ಲಿ ಆತ್ಮವಸ್ತು ಸಿಗುವುದಿಲ್ಲ. ನಮ್ಮ

ಜ್ಞಾನಕ್ಕೆ ವಿಷಯವಾಗತಕ್ಕವೆಲ್ಲವೂ "ಅನತ್ತಾ" ಎಂದರೆ ಅನಾತ್ಮವಾದುದು. "ತನ್ಹಾ" ಅಥವಾ ಅತ್ಯಾಸೆಯ ಸೆಳೆತದಿಂದ ಮುಕ್ತವಾದ, ಶೋಕರಹಿತವಾದ, ದುಃಖರಹಿತವಾದ, ವಸ್ತು ಪ್ರಪಂಚವನ್ನು ಮೀರಿದ ಸ್ಥಿತಿಯೊಂದಿದೆ. ಬಾಹ್ಯ ಉಪಾಧಿಗಳ ಮೂಲಕ ಈ ಇರವಿನ ಸತ್ವವನ್ನು ಪಡೆಯಲಾರೆವು. ತನ್ನ ಅಜ್ಞಾನದಲ್ಲಿ ಮಾನವ ನಿಜಸ್ವರೂಪವನ್ನು ಮರೆತು ಅಸದ್ವಸ್ತುವಿನೊಡನೆ ಏಕರೂಪವಾಗುತ್ತಾನೆ. ಬಾಹ್ಯ ಭೌತಿಕ ವಿಶ್ವಕ್ಕೂ ಆಚೆಯಿರುವ ಪರತತ್ವವನ್ನು ಅವನು ಅರಿಯಬೇಕು. "ಆತ್ಮವೇ ನಿನ್ನ ಜ್ಯೋತಿಯಾಗಿ ಬೆಳಗಲಿ. ಆತ್ಮವೇ ಶರಣ್ಯವಾಗಲಿ; ಧರ್ಮವೇ ನಿನ್ನ ಜ್ಯೋತಿಯಾಗಲಿ ಧರ್ಮಕ್ಕೆ ಶರಣು ಹೋಗು."

ಪ್ರಜ್ಞಾ ಎನ್ನುವುದು ಯಾವುದನ್ನೂ ಬೆಳಗದಿರುವ ದೇದೀಪ್ಯಮಾನ ಸ್ಥಿತಿಯಲ್ಲ; ಏನನ್ನೂ ಪ್ರತಿಬಿಂಬಿಸದ ದರ್ಪಣವಲ್ಲ. ಅದು ಜ್ಞಾನ ಜ್ಞೇಯಗಳಿಂದ ಮೇಲೇರಿದ ಪ್ರಜ್ಞೆ. ಮಾಂಡೂಕ್ಯ ಉಪನಿಷತ್ತು ಇದನ್ನು ತುರೀಯ ಅಥವಾ ಉಪಾಧಿಗಳಿಂದ ಬಿಡುಗಡೆ ಹೊಂದಿದ ಸ್ಥಿತಿ ಎಂದು ಕರೆಯುತ್ತದೆ. ಬೌದ್ಧ ಗ್ರಂಥಗಳು ಅನೇಕ ವೇಳೆ ಒಂದು ಅಜಾತಾ, ಅಕಾರ್ಯ ಮತ್ತು ಅಚಲವಾದುದನ್ನೂ ಅದನ್ನು ಸೇರುವ ಮಾರ್ಗವನ್ನೂ ಉಲ್ಲೇಖಿಸುತ್ತವೆ. ನಿರ್ವಾಣಕ್ಕೆ ಒಯ್ಯುವ ಮಾರ್ಗ ಶೀಲದ ಮಾರ್ಗ. ಉಪನಿಷತ್ತುಗಳಂತೆಯೇ ಬುದ್ಧ ಬರಿಯ ಕರ್ಮಠತೆಯನ್ನು ವಿರೋಧಿಸಿ ಅಂತರಂಗ ಶುದ್ಧಿಯನ್ನೇ ಒತ್ತಿ ಹೇಳುತ್ತಾನೆ. "ಕಾಷಾಯ ವಸ್ತ್ರವನ್ನು ಉಟ್ಟ ಮಾತ್ರಕ್ಕೆ ಲೋಭ, ಮತ್ಸರ ಮೊದಲಾದ ದುರ್ಗಣಗಳು ನಮ್ಮನ್ನು ತೊರೆಯುವುದಾದರೆ, ಮಗು ಹುಟ್ಟಿದೊಡನೆ ಅದರ ನೆಂಟರಿಷ್ಟರು ಈ ವಸ್ತ್ರಗಳನ್ನೇ ತೊಡಿಸಿ "ಬಾ, ವರಪುತ್ರನೇ ಕಾಷಾಯ ವಸ್ತ್ರವನ್ನು ಧರಿಸು; ಇದನ್ನು ಧರಿಸುವ ಮಾತ್ರದಿಂದಲೇ ಲೋಭಿಗಳು ಲೋಭವನ್ನು ತೊರೆಯುತ್ತಾರೆ, ಮತ್ಸರಿಸುವವರು ಮಾತ್ಸರ್ಯವನ್ನು ಬಿಡುತ್ತಾರೆ" ಎಂದು ಹೇಳುತ್ತಿದ್ದರು."

ಉಪನಿಷತ್ತಿನ ಬೋಧೆಯಂತೆಯೇ ಬುದ್ಧನೂ ಕಾಲದ ಪರಿಮಿತ ಕ್ಷೇತ್ರದಿಂದ ಬಿಡುಗಡೆ ಹೊಂದಬೇಕೆಂದು ಉಪದೇಶಿಸುತ್ತಾನೆ. ತೃಷ್ಣೆಯಿಂದ ಸ್ವತಂತ್ರರಾದಾಗ ಮಾತ್ರ ಇದು ಸಾಧ್ಯ. ಈ "ತನ್ಹಾ" ಅಥವಾ "ಈರ್ಷೆ"ಯ ಬೆಂಕಿಗೆ ಹವಿಸ್ಸನ್ನು ನೀಡಲು ನಾವು ನಿರಾಕರಿಸಿದಾಗ

ಮಾತ್ರ ಆ ಬೆಂಕಿ ಇಂಧನವಿಲ್ಲದೆ ಆರಿಹೋಗುತ್ತದೆ. ನಿರ್ವಾಣವೆಂದರೆ ಕಾಮ, ಕ್ರೋಧ, ಲೋಭಗಳಿಂದ ಬಿಡುಗಡೆ. ಆದರೆ ಅದು ಶೂನ್ಯಸ್ಥಿತಿಯಲ್ಲ. ಅದು ಆನಂದಮಯ, ಅನಂತ, ಸ್ಥಿರ, ಶಾಶ್ವತ ಸ್ಥಿತಿ. ಈ ಸ್ಥಿತಿಯಲ್ಲಿನ ಸ್ವಾತಂತ್ರ್ಯಾನುಭವ, ಸಂಸಿದ್ಧಿ, ಸಂಸ್ಪಷ್ಟ ದರ್ಶನ, ಪ್ರಶಾಂತ ಆನಂದ ಇವುಗಳನ್ನು ಬುದ್ಧ ಒತ್ತಿ ಹೇಳುತ್ತಾನೆ.

ನಿರ್ವಾಣ ಸ್ಥಿತಿ ಅವರ್ಣನೀಯವಾದುದೆಂದು ಅದರ ಬಗ್ಗೆ ತರ್ಕಿಸಲು ಬುದ್ಧ ನಿರಾಕರಿಸಿದನೇ ಹೊರತು ಅದು ಶೂನ್ಯವಾದುದು ಎಂಬ ಭಾವನೆಯಿಂದಲ್ಲ. ಬುದ್ಧಿಮಾರ್ಗವನ್ನೇ ಅನುಸರಿಸಿ, ಕೆಲವು ತಾತ್ವಿಕ ಪ್ರಶ್ನೆಗಳನ್ನು ವ್ಯರ್ಥವೆಂದು ಭಾವಿಸಿ ಅವುಗಳಿಗೆ ಉತ್ತರ ಹೇಳಲು ನಿರಾಕರಿಸಿದ. ಅಧಿಕಾರವಾಣಿಯ ತತ್ವವನ್ನು ಬುದ್ಧ ಒಪ್ಪಲಿಲ್ಲ. ಏಕೆಂದರೆ ಸ್ವಾನುಭವ ಸ್ವಪ್ರಯತ್ನಗಳಿಂದ ಗಳಿಸದೆ ಅಧಿಕಾರಕ್ಕೆ ಮಣಿದು ಒಪ್ಪಿದ ಸತ್ಯ ನಿಷ್ಪ್ರಯೋಜಕವೆಂದು ಭಾವಿಸಿದ.

ಮಹಾಯಾನ ಬೌದ್ಧಮತದಲ್ಲಿ ಶ್ರದ್ಧೆ ಮತ್ತು ಪ್ರಾರ್ಥನೆಗಳ ಸಹಾಯದಿಂದ ಭಕ್ತನಿಗೂ ಪರವಸ್ತುವಿಗೂ ಸಂಬಂಧವೇರ್ಪಡುತ್ತದೆಂದು ಬೋಧಿಸಲಾಗಿದೆ. ಇಂತಹ ಭಕ್ತ ಬುದ್ಧದೇವನ ಅನುಗ್ರಹಕ್ಕೆ ಪಾತ್ರನಾಗಿ ಮಾರ್ಗದರ್ಶನ ಪಡೆಯುತ್ತಾನೆ. ವಿವಿಧ ರೀತಿಯ ಬೌದ್ಧ ಧರ್ಮಗಳಲ್ಲೆಲ್ಲಾ ಚಿತ್ತೈಕಾಗ್ರತೆಗೇ ವಿಶೇಷ ಪ್ರಾಧಾನ್ಯತೆಯನ್ನು ಕೊಟ್ಟಿದೆ.

## ೭. ಕ್ರೈಸ್ತ ಧರ್ಮ

ಏಸುವಿನ ಆತ್ಮಾನುಭಾವ ಅಪರೋಕ್ಷ ಜ್ಞಾನಕ್ಕೆ ಒಂದು ಉತ್ಕೃಷ್ಟ ನಿದರ್ಶನ. ಆತನ ಕೃತಿ ವಚನಗಳಲ್ಲಿ ಈಶ್ವರಸಾನ್ನಿಧ್ಯಭಾವ ತುಂಬಿ ತುಳುಕುತ್ತದೆ. ಜರೊಸಲೇಮಿಗೆ ಹೋಗುವ ಮುನ್ನ ಆತನ ಮುಖದ ಮೇಲೆ ಮೂಡಿದ ದಿವ್ಯತೇಜಸ್ಸು, ದಿವ್ಯಾನುಭವದಿಂದಾದ ರೂಪಪರಿವರ್ತನೆ ಆತನ ಅಂತರಂಗದಲ್ಲಿ ಸಂಭವಿಸಿದ ಆಧ್ಯಾತ್ಮಿಕ ಪರಿವರ್ತನೆಯ ಸೂಚಕವಾಗಿದೆ. ಬ್ಯಾಪ್ಟಿಸ್ಟನಾದ ಸಂತಜಾನ್ ಮಾನವರಲ್ಲೆ ಅತಿಶ್ರೇಷ್ಠನಾದರೂ ಸ್ವರ್ಗದಲ್ಲಿ ಈಶ್ವರಾನುಗ್ರಹಕ್ಕೆ ಪಾತ್ರನಾದ ಅತಿ ಕನಿಷ್ಠನಿಗಿಂತಲೂ ಕನಿಷ್ಠ ಎಂದು ಏಸು ಹೇಳಿದ. ನೇರವಾಗಿ ಸತ್ಯ ದರ್ಶನಮಾಡಿದವನು ಅಂತರಂಗದ ಅನುಭವವಿಲ್ಲದೆ ಸತ್ಯದ ವಿಷಯದಲ್ಲಿ ವಾದಮಾಡುವ

ವನಿಗಿಂತಲೂ ಶ್ರೇಷ್ಠ ಎಂದು ಆತನ ಅರ್ಥ. ಕೇವಲ ತಾರ್ಕಿಕ ದೃಷ್ಟಿಯನ್ನು ನಾವು ದಾಟಿ ಆಂತರಂಗಿಕವಾದ, ಸಮಾಜಜೀವನಕ್ಕೂ ಮೀರಿದ ಆಧ್ಯಾತ್ಮಿಕ ಸತ್ಯದ ಅನುಭವ ಪಡೆಯಬೇಕು.

ಏಸು ನಿರೀಕ್ಷಿಸುವುದು ಆಂತರಂಗಿಕ ನವ್ಯ ಚೇತನವನ್ನು; ಆಂತರಂಗಿಕ ಪರಿವರ್ತನೆಯನ್ನು. ದೇವರ ರಾಜ್ಯ (The Kingdom of Heaven) ಆಕಾಶದಲ್ಲಿನ ಒಂದು ತಾಣವಲ್ಲ. ನಮ್ಮ ಮನಸ್ಸಿನ ಒಂದು ವಿಶಿಷ್ಟ ಸ್ಥಿತಿ. ಆ ರಾಜ್ಯ ಈಗಲೇ ಇಲ್ಲಿಯೇ ಸನ್ನಿಹಿತವಾಗಿಯೇ ಇದೆ. ಸತ್ಯ ಸಾಕ್ಷಾತ್ಕಾರವೇ ಸ್ವರಾಜ್ಯ ಅಥವಾ ಸ್ವಾತಂತ್ರ್ಯಕ್ಕೆ ದಾರಿ. ಅಂತರಂಗ ಶುದ್ಧಿಯನ್ನು, ಮಾನವನಿಗೆ ಸಾಧ್ಯವಾಗುವ ಉತ್ಕರ್ಷವನ್ನು ಕುರಿತು ಏಸು ನುಡಿಯುತ್ತಾನೆ. 'ಪಶ್ಚಾತ್ತಾಪ ಪಡಿ' ಎಂದು ಬೋಧಿಸಿದಾಗ ಖಿನ್ನರಾಗಿ ಎಂದು ಅರ್ಥವಲ್ಲ. ನಮ್ಮಲ್ಲಿ ಒಂದು ಆಂತರಂಗಿಕ ಪರಿವರ್ತನೆಯನ್ನುಂಟು ಮಾಡುವುದೇ ಉದ್ದೇಶ. 'ರಿಪೆಂಟೆನ್ಸ್' ಎನ್ನುವ ಇಂಗ್ಲಿಷ್ ಶಬ್ದಕ್ಕೆ ಗ್ರೀಕ್ ಭಾಷೆಯ ಪರ್ಯಾಯ ಶಬ್ದ 'ಮೆಟನೋಯಿಯಾ' (Meta-noia) ಅಂದರೆ ನಮ್ಮ ಚಿತ್ತವು ತನ್ನ ಸಾಧಾರಣ ಎಲ್ಲೆಯಿಂದ ಮೇಲೇರುವಂತೆ ಮಾಡುವುದು. ಇದು ಅಂತರಂಗದಲ್ಲಿ ಸಂಭವಿಸುವ ಪರಿಣಾಮ. "ನೀವು ಪರಿವರ್ತನೆಯಾದ ಹೊರತು, ಮಕ್ಕಳಂತೆ ಆದ ಹೊರತು" ಎಂದು ಏಸು ಹೇಳುವಾಗ ಅವನ ಅರ್ಥ ನಾವು ವಿಷಯಾಸಕ್ತಿಯಿಂದ, ಇಂದ್ರಿಯಜನ್ಯ ನಿದ್ದೆಯಿಂದ ಎಚ್ಚರಗೊಳ್ಳಬೇಕು ಎಂದು. ಸತ್ತವರು ಮತ್ತೆ ಏಳಬೇಕು. ನಮ್ಮೊಳಕ್ಕೇ ನಾವು ಹಿಂತಿರುಗಬೇಕು; ಅಂದರೆ ಮತ್ಸರ ದ್ವೇಷಗಳಿಂದ ಬಿಡುಗಡೆ ಹೊಂದಬೇಕು. "ನೀನು ಆರ್ತನಾದ ಹೊರತು, ದೇವರ ರಾಜ್ಯದಲ್ಲಿ ನಿನಗೆ ಪ್ರವೇಶವಿಲ್ಲ." ವೈರಾಗ್ಯ ಅಭ್ಯಾಸಗಳಿಂದ ನಮ್ಮ ಕ್ಷುದ್ರಸ್ವಭಾವವನ್ನು ಪ್ರಬಲವಾಗಿ ಮೆಟ್ಟಿ ಉನ್ನತಸ್ಥಿತಿಗೆ ಏರಬೇಕು.

"ನೀನು ಮತ್ತೊಮ್ಮೆ ಮೇಲಿನಿಂದ ಹುಟ್ಟಬೇಕು". ಸ್ವಾಭಾವಿಕ ಹುಟ್ಟಲ್ಲ, ಆಧ್ಯಾತ್ಮಿಕ ಪುನರ್ಜನ್ಮ; ಪಾರಮಾರ್ಥಿಕ ದ್ವಿಜತ್ವ. ನಮ್ಮ ಇಡೀ ಸ್ವಭಾವದ ಯೋಗ್ಯ ಪುನರ್ರಚನೆಯೇ ಮೋಕ್ಷ. ಈ ನಿಯಮ ಪಾರಮಾರ್ಥಿಕವಾದದ್ದು. ಸಂತಪಾಲ್ ಹೀಗೆ ಬರೆಯುತ್ತಾನೆ; "ಭಗವಂತನ ನಿಯಮಗಳನ್ನು ನಾನೇ ಮನಸ್ಸಾಕ್ಷಿಯಾಗಿ ಪಾಲಿಸುತ್ತೇನೆ.

ಆದರೆ ನನ್ನ ದೇಹ ಪಾಪದ ನಿಯಮಕ್ಕೆ ಶರಣುಹೋಗಿದೆ." "ಅಂತರಾತ್ಮನ ಪ್ರೇರಣೆಯಿಂದ ಈಶ್ವರನ ನಿಯಮಗಳನ್ನು ಪಾಲಿಸುವುದರಲ್ಲಿ ನನಗೆ ಆನಂದ."

ಮುಕ್ತನಾದವನು ಸೃಷ್ಟಿ ನಿಯಮಗಳಿಂದ ಮೇಲೇರುವನು. 'ಸೇಬತ್ ವ್ರತ ಮನುಷ್ಯನಿಗಾಗಿ ಮಾಡಿದ್ದು, ಮನುಷ್ಯ ಸೇಬತ್ತಿಗಾಗಿ ಅಲ್ಲ.' ಭಗವತ್ಪ್ರೇಮವೇ ಸೃಷ್ಟಿನಿಯಮದ ಪರಿಪೂರ್ಣತೆ.

ಮನುಷ್ಯ ಅರಿಯಬೇಕಾದ ರಹಸ್ಯ ಗುರುಶಿಷ್ಯ ಪರಂಪರೆಯಿಂದ ಉಪದೇಶಮಾಡಲ್ಪಡುತ್ತದೆ. ಏಸುವಿಗೆ ಈ ಆಧ್ಯಾತ್ಮಜ್ಞಾನ ಪ್ರಾಪ್ತವಾಗಿತ್ತು. ಆದರೆ ಅದನ್ನು ಅನಧಿಕಾರಿಗಳಿಗೆ, ಭಕ್ತರಲ್ಲದವರಿಗೆ ಹೇಳಲು ಇಚ್ಛಿಸಲಿಲ್ಲ. "ಪವಿತ್ರವಾದುದನ್ನು ಶ್ವಾನಗಳಿಗೆ ನೀಡಬೇಡ, ಮುತ್ತುಗಳನ್ನು ಹಂದಿಗಳ ಮುಂದೆ ಚೆಲ್ಲಬೇಡ, ಅವು ಅವನ್ನು ತುಳಿದುಬಿಡುತ್ತವೆ, ಮತ್ತು ನಿನ್ನ ಮೇಲೆ ತಿರುಗಿಬಿದ್ದು ನಿನ್ನನ್ನೇ ತಿರಿದು ತಿನ್ನುತ್ತವೆ."

ನಿಜವಾದ ಮತನಿಷ್ಠೆ ಅಂದರೆ, ಧ್ಯಾನದಿಂದ, ತಪಸ್ಸಿನಿಂದ ಆತ್ಮದ ಪುನರುಜ್ಜೀವನ ಮಾಡಿಕೊಳ್ಳುವುದು. ಏಸುವಿನ ಮುವತ್ತು ವರುಷಗಳ ಮೌನ ಮತ್ತು ಮರಳು ಕಾಡಿನಲ್ಲಿ ನಲವತ್ತು ದಿನಗಳ ಮೌನ ಈ ಸಿದ್ಧಿ ಪಡೆಯಲು ಕೈಗೊಂಡ ಸಾಧನಗಳು. ಏಸು ಮಾನವನ ತನುಜ, ಈಶ್ವರನ ವರಪುತ್ರ. ಪಾರ್ಥಿವ ಮತ್ತು ಸ್ವರ್ಗೀಯ ಇವೆರಡು ನೆಲೆಗಳೊಡನೆಯೂ ಏಸು ಒಂದುಗೂಡಿದ್ದ. ಮಾನವನಾಗಿ ಎಲ್ಲ ಮಾನವರಂತೆ ಪ್ರಲೋಭನಗಳಿಗೂ ಒಳಗಾಗಿದ್ದ. ಕಡೆಯಗಳಿಗೆಯವರೆಗೂ ಪ್ರಲೋಭನೆಯ ಕಾಟ ಅವನಿಗಿತ್ತು. "ನನ್ನ ಸ್ವಾಮಿಯೇ ಅದೇಕೆ ನನ್ನ ಕೈ ಬಿಟ್ಟಿರುವೆ ?" ಎಂದು ತಾಪದಿಂದ ಬೆಂದಿತ್ತು ಆ ಜೀವ. ಏಸು ಎಲ್ಲರಿಗೂ ಮಾದರಿಯಾಗಿದ್ದಾನೆ, ಏಕೆಂದರೆ, ತನ್ನ ಅಂತರಂಗದಲ್ಲಿ ಕಾಡುತ್ತಿದ್ದ ಸಂಕಟ, ಸಂಶಯ, ಸಮ್ಮೋಹ ಇವುಗಳೊಡನೆ ಹೋರಾಡಿ ಉನ್ನತಿಯ ಮಟ್ಟಕ್ಕೆ ಏರಿದವನು. ತನ್ನ ಅಂತರಂಗದ ಔನ್ನತ್ಯದ ಸೋಪಾನವನ್ನೇರಲು ಆತ ದುಃಖವನ್ನು ಅನುಭವಿಸಬೇಕಾಯಿತು.

ಈ ಅವತಾರ ಎರಡುಸಾವಿರವರುಷಗಳ ಕೆಳಗೆ ನಡೆದ ಐತಿಹಾಸಿಕ ಘಟನೆ ಮಾತ್ರ ಎಂದು ಭಾವಿಸಬಾರದು. ಎಲ್ಲ ಮುಮುಕ್ಷು ಚೇತನಗಳಲ್ಲೂ

ಸತತವಾಗಿ ನಡೆವ ಘಟನೆ ಇದು. ಏಕ್‌ಹಾರ್ಟ್ ಮಹಾನುಭಾವ ಮಾನವನ ಅಂತರಂಗದಲ್ಲಿ ಈಶ್ವರನ ಆವಿಷ್ಕಾರವೇ ಮತನಿಷ್ಠೆಯಗುರಿ ಎನ್ನುತ್ತಾನೆ.

### ೮. ಇಸ್ಲಾಮ್ : ಸೂಫಿಪಂಥ

ಈಶ್ವರನ ಆರಾಧನೆ ಮತ್ತು ಈಶ್ವರನನ್ನು ಅಪ್ರತಿಮ ಸರ್ವೇಶ್ವರನೆಂದು ಅಂಗೀಕರಿಸುವುದು ಇಸ್ಲಾಂ ಧರ್ಮದ ತಿರುಳು. ಕುರಾನ್ ಈಶ್ವರನ ಏಕಮೇವಾದ್ವಿತೀಯ ತತ್ವಕ್ಕೆ ದೇದೀಪ್ಯಮಾನಸಾಕ್ಷಿ. ಹುತಾತ್ಮರನ್ನೂ, ಸಂತರನ್ನೂ, ದೇವತೆಗಳನ್ನೂ ನಂಬಿದ ಕ್ರೈಸ್ತರು ಈ ಏಕನಿಷ್ಠೆಗೆ ಭಂಗ ತರುವರೆಂದು ಮೊಹಮ್ಮದರಿಗೆ ತೋರಿತು. ದೇವರು, ದೇವಪುತ್ರ ಮತ್ತು ದಿವ್ಯಾತ್ಮ ಎಂಬ ತ್ರಿಮೂರ್ತಿ ರಹಸ್ಯ (Trinity) ಮತ್ತು ಕ್ರಿಸ್ತಾವತಾರ ಗಳು ಭಗವದೇಕತ್ವಕ್ಕೆ ಅಸಮಂಜಸ. ಪ್ರಾಚ್ಯಕ್ರೈಸ್ತರು ಸ್ಥೂಲವಾದ ಮೂರು ದಿವ್ಯಮೂರ್ತಿಗಳನ್ನು ಮುಂದಿಟ್ಟು ಏಸುವನ್ನು ಈಶ್ವರ ಪುತ್ರ ತತ್ವವನ್ನಾಗಿ ರೂಪಿಸಿದರು. ಮಾನವರ, ಪ್ರತಿಮೆಗಳ ಆರಾಧನೆಯನ್ನೂ, ನಕ್ಷತ್ರ ಗ್ರಹಗಳ ಪೂಜೆಯನ್ನೂ ಮಹಮ್ಮದ್ ನಿರಾಕರಿಸಿದ. ಉದಯಿಸಿದು ದೆಲ್ಲ ಅಸ್ತಮಿಸಲೇಬೇಕು, ಯಾವುದು ಹುಟ್ಟುವುದೋ ಅದು ಅಳಿಯಲೇ ಬೇಕು. ಪಾಪಭೂಯಿಷ್ಠವಾದುದೆಲ್ಲ ಶಿಥಿಲವಾಗಲೇಬೇಕು, ವಿನಾಶ ಹೊಂದ ಬೇಕು, ಎಂಬ ತತ್ವವೇ ಇವಕ್ಕೆ ಆಧಾರ. ಮಹಮ್ಮದರ ಅಭಿಪ್ರಾಯದಲ್ಲಿ ಈಶ್ವರ ಅನಂತ, ಸನಾತನ, ರೂಪರಹಿತ, ದೇಶಾತೀತ. ಅವನಿಗೆ ಸಂತತಿಯೂ ಇಲ್ಲ; ಸರಿಸಮವಾದುದೂ ಇಲ್ಲ. ಈಶ್ವರನು ನಮ್ಮ ಅಂತರತಮ ಆಲೋಚನೆ ಗಳಲ್ಲಿರುವವನು. ಅವನು ಸ್ವತಂತ್ರ. ಕಲ್ಯಾಣ ಗುಣಗಳೆಲ್ಲವೂ ಅವನೊಳಗೇ ಪ್ರಾದುರ್ಭಾವವಾದವು. ಕಾಲ, ದೇಶ, ಜಡತ್ವ, ಚೈತನ್ಯ, ಪ್ರಜ್ಞೆ ಮತ್ತು ಬುದ್ಧಿ, ಈ ಕಲ್ಪನೆಗಳೆಲ್ಲವನ್ನೂ ಅಜ್ಞಾತವಸ್ತುವಿನಿಂದ ದೂರಮಾಡಿದಾಗ ಯಾವುದು ಉಳಿಯುವುದೋ ಅದೇ ಈಶ್ವರ. ಮಹಮ್ಮದ್ ಮತ್ತು ಅವನ ಅನುಯಾಯಿಗಳು ಏಕೇಶ್ವರವಾದಿಗಳು. ಕ್ರೈಸ್ತ ಶಾಸ್ತ್ರಗಳಲ್ಲಿ ಚರ್ಚಿನ ಆಡಂಬರದಲ್ಲಿ ಈ ಏಕೇಶ್ವರತತ್ವ ಕುಂಠಿತವಾಗಿದೆ ಎಂದು ಅವರ ಆಕ್ಷೇಪ. ಪುರೋಹಿತರನ್ನೂ, ಸನ್ಯಾಸಿಗಳನ್ನೂ ತಮ್ಮ ಸ್ವಾಮಿಗಳೆಂದು ಕ್ರಿಶ್ಚಿಯನ್ನರು ಭಾವಿಸಿರುವುದಕ್ಕೆ ಮಹಮ್ಮದ್ ಆಕ್ಷೇಪವೆತ್ತುತ್ತಾನೆ.

ಮತಶಾಸ್ತ್ರ ಪಂಡಿತರು ಏನೆಂದರೂ ಮಹಮ್ಮದ್ ಸನಾತನ ಪರಂಪರೆಗೆ ಸೇರಿದ ಸಿದ್ಧಪುರುಷ. ಕುರ್ರಾ ಋಷಿಯೊಬ್ಬನ ಗ್ರಂಥ. ಮಹಮ್ಮದನನ್ನು ತಮ್ಮ ಆಚಾರ್ಯನೆಂದು ಅಂಗೀಕರಿಸಿರುವ ಸೂಫಿಸಂಪ್ರದಾಯ ಈಶ್ವರನ ಅಪರೋಕ್ಷಾನುಭವಕ್ಕೆ ಪ್ರಾಶಸ್ತ್ಯ ನೀಡುತ್ತದೆ. ಸೂಫಿಗಳು ಏಕಾಂತವಾಸಿಗಳಾಗಿದ್ದರು. ಅವರ ದರ್ಶನಾಪೇಕ್ಷಿಗಳಾಗಿ ಬಂದ ಭಕ್ತರ ಕಾಣಿಕೆಯಿಂದ ಜೀವಿಸುತ್ತಿದ್ದರು. ವಿಶ್ವದಲ್ಲಿ ಇರುವುದು ಒಂದೇ ಒಂದು ಪರತತ್ವ, ಇದು ತಿಳುವಳಿಕೆಗೆ ಮೀರಿದುದೂ, ಅಗೋಚರವೂ ಆದುದು ಎಂದು ಸೂಫಿ ಪಂಥದ ನಂಬಿಕೆ. ಅದರ ಹೆಸರು ಮತ್ತು ಗುಣಗಳಿಂದ ನಾವು ಅದರ ಜ್ಞಾನವನ್ನು ಪಡೆಯಲು ಪ್ರಯತ್ನಿಸಬೇಕು. ಶುದ್ಧ ಸತ್ವಕ್ಕೆ ಹೆಸರೂ ಇಲ್ಲ ಗುಣವೂ ಇಲ್ಲ. ಅದರ ನಿರಂಜನ ಸ್ವರೂಪವನ್ನು ಬಿಟ್ಟು ವ್ಯಕ್ತಸ್ವರೂಪಕ್ಕೆ ಇಳಿದಾಗ ಹೆಸರುಗಳೂ ಗುಣಗಳೂ ಅದಕ್ಕೆ ಹಚ್ಚಲ್ಪಡುತ್ತವೆ.

ಗುಣರಹಿತವಾದ ಬಂಧಮುಕ್ತ ಪರತತ್ವವನ್ನು "ಜೀಲೀ" (Jīlī) ಎಂಬ ಸೂಫಿ "ತಿಮಿರಾವೃತ" (ಅಲ್-ಅಮಾ) ಎಂದು ಕರೆಯುತ್ತಾನೆ. ಅದರಲ್ಲಿ ಚಿತ್ತಸ್ಫುರಣವಾದಾಗ ಏಕಂ, ತತ್, ಅಹಮ್ ಎಂಬ ಮೂರು ಅವಸ್ಥೆಗಳು ಪ್ರಾಪ್ತವಾಗುತ್ತವೆ. ಈ ಕ್ರಮದಿಂದ ಪರತತ್ವವೇ ಸಮಸ್ತ ವಿಚಾರದ ಜ್ಞಾತೃವೂ ಜ್ಞೇಯವೂ ಆಗುತ್ತದೆ. ಇದೇ ಸೃಷ್ಟಿಯ ಕ್ರಮವನ್ನು ಒಳಗೊಂಡ ವಿಶಿಷ್ಟಗುಣಗಳುಳ್ಳ ಈಶ್ವರ ತತ್ವವಾಗಿ ಪರಿಣಮಿಸುತ್ತವೆ. ಬಾಹ್ಯಜಗತ್ತು ಈಶ್ವರತತ್ವದ ದಿವ್ಯದರ್ಶನ. ಇಬ್ನ್ ಅಲ್ ಅರಬೀ "ನಮ್ಮ ಇರುವಿಕೆಗೆ ಈಶ್ವರ ನಮಗೆ ಅವಶ್ಯಕ, ಅವನು ಅಭಿವ್ಯಕ್ತಗೊಳ್ಳುವ ಸಲುವಾಗಿ ನಾವು ಅವನಿಗೆ ಅವಶ್ಯಕ" ಎನ್ನುತ್ತಾನೆ.

ದೇಹದಲ್ಲಿ "ಬದ್ಧ"ನಾದ ಜೀವಾತ್ಮ ಪರಮಾತ್ಮನ ಅಂಶ. ದೇಹದ ಬಂಧನದಿಂದ ಮುಕ್ತನಾದಾಗ ತನ್ನ ನಿದಾನವನ್ನು ಮತ್ತೆ ಮುಟ್ಟುತ್ತಾನೆ. ಬಾಹ್ಯ ವಸ್ತುಗಳೆಲ್ಲ ಪರತತ್ವದ ಕೆಲವು ಗುಣಗಳನ್ನು ಒಳಗೊಂಡಿರುತ್ತವೆ. ಆದರೆ ಮಾನವನಾದರೋ ಬ್ರಹ್ಮಾಂಡದ ಎಲ್ಲ ಗುಣಗಳನ್ನೂ ಪ್ರತಿಬಿಂಬಿಸುವ ಸೂಕ್ಷ್ಮಾಕೃತಿ. ಪರತತ್ವ ಮಾನವನಲ್ಲಿ ಚೇತನಗೊಳ್ಳುತ್ತದೆ. ಸೃಷ್ಟಿಯ ಪರಮಗುರಿಯಾದ ಪೂರ್ಣ ಪ್ರಜ್ಞನಲ್ಲಿ, ಪ್ರವಾದಿಯಲ್ಲಿ ಅಥವಾ ಸಂತನಲ್ಲಿ ದೇವ-ಮಾನವರು ಒಂದಾಗುತ್ತಾರೆ.

ಸೂಫಿಸಿದ್ಧಾಂತ ಕುರಾನಿನಲ್ಲಿ ಬೀಜರೂಪವಾಗಿ ಮೂಡಿದೆ. "ಅಲ್ಲಾವಿನ ಮುಖ (ಸತ್ಯವಸ್ತು)ಒಂದು ಬಿಟ್ಟು ಮತ್ತೆಲ್ಲವೂ ಕ್ಷಯಿಸುತ್ತದೆ (ಹಾಲಿಕ್)." "ಭೂಮಿಯ ಮೇಲೆ ಇರುವ ಪ್ರತಿಯೊಂದೂ ಲಯ (ಫಾನಿ) ವಾಗುತ್ತಿದೆ. ಆದರೆ ನನ್ನ ಸ್ವಾಮಿಯ ದಿವ್ಯಪೂಜ್ಯ ಮುಖಬಿಂಬ ಮಾತ್ರ ಎಂದೆಂದೂ ಉಳಿಯುತ್ತದೆ. ನೀನು ಯಾವ ಕಡೆ ತಿರುಗಿದರೂ ಅಲ್ಲಾವಿನ ಮುಖ ಇದೆ." ಮಾನವನ ಅರಿವಿಗೆ ನಿಲುಕದ ಎತ್ತರದಲ್ಲಿರುವ ಅಲ್ಲಾವಿನ ವಿಶಿಷ್ಟ ವ್ಯಕ್ತಿತ್ವ ಸೃಷ್ಟವಾದ ವಸ್ತುಗಳ ಮೂಲಕ ಗೋಚರವಾಗಿ ಸತ್ಯಸ್ವರೂಪವಾಗಿ ರೂಪಾಂತರ ಹೊಂದಿತು. ಅವನು ಮಾನವನ ಅಂತರಾತ್ಮ. ಆನಂದಮಯವಾದ ತನ್ಮಯತೆಯಲ್ಲಿ ಅಹಂಭಾವವನ್ನು ಕಳೆದುಕೊಂಡು ಆತ್ಮಾಹುತಿ ಮಾಡಿಕೊಂಡಾಗ ಈಶ್ವರನು ಪ್ರಾಪ್ತವಾಗುತ್ತಾನೆ. "ಫನಾ" ಅನ್ನುವ ಸ್ಥಿತಿಯ ವಿವರಣೆ ಇದು, ಇದೊಂದು ಅತೀಂದ್ರಿಯ ಅನುಭವ. ಅದರ ಕಡೆಗೆ ಹೋಗುವದಾರಿ. ಕಾಮತೃಷ್ಣೆಗಳ ದಮನ. ಇದು ಬೌದ್ಧ ಧರ್ಮದ ನಿರ್ವಾಣ ಮತ್ತು ಅದನ್ನು ಮುಟ್ಟುವ ದಾರಿಯನ್ನು ನೆನಪಿಗೆ ತಂದುಕೊಡುತ್ತದೆ. ಸೂಫಿಗಳು ಧ್ಯಾನದ ಮೂಲಕ ತಮ್ಮ ಅಂತರಂಗದಲ್ಲಿ ಈ ಪರವಸ್ತುವನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಪ್ರಯತ್ನ ಪಟ್ಟರು.

ಅತಿಶ್ರೇಷ್ಠ ಸೂಫಿಗಳಲ್ಲಿ ಒಬ್ಬನೂ ತತ್ವನಿಷ್ಠನಾಗಿ ಹುತಾತ್ಮನಾದವನೂ ಆದ ಅಲ್‌ಹಲ್ಲಾಜ್, ಆತ್ಮಸಾಕ್ಷಾತ್ಕಾರದ ಅನುಭವವನ್ನೇ ಉಲ್ಲೇಖಿಸುತ್ತಾನೆ. "ತಫ್ರಿದ್" ಎಂದು ಅದನ್ನು ಕರೆದಿದ್ದಾನೆ. ಅನಾತ್ಮದಿಂದ ನಾವು ವಿಮುಖರಾದಾಗ ಆತ್ಮದ ಅರಿವು ನಮಗೆ ಉಂಟಾಗುತ್ತದೆ.

ಆತ್ಮಾನಂದದಿಂದ ವಿಶ್ಲೇಷಹೊಂದಿದ ಶುದ್ಧಾತ್ಮದೆಶೆಯನ್ನೂ, ಜೀವಾತ್ಮ ಪರಮಾತ್ಮರು ಐಕ್ಯವಾಗುವ ಸ್ಥಿತಿಯನ್ನೂ ವರ್ಣಿಸಿರುತ್ತಾನೆ. ದುಃಖದಿಂದ ದೂರಸರಿಯುವುದು ಇದಕ್ಕೆ ದಾರಿಯಲ್ಲ. ಜೀವಾತ್ಮನು ಪರಮಾತ್ಮನ ಸ್ಥಿತಿಗೆ ಏರಬೇಕಾದರೆ ಪರಿತಾಪವೇ ಇದಕ್ಕೆ ಒತ್ತಾಸೆಯಾಗುತ್ತದೆ.

ಅಲ್ ಹಲ್ಲಾಜನ **ಅನಾಅಲ್‌ಹಕ್** ಅಂದರೆ ನಾನೇ ಸತ್ಯ, ಅನ್ನುವ ವಾಕ್ಯ ಉಪನಿಷತ್ತಿನ '**ಅಹಂಬ್ರಹ್ಮಾಸ್ಮಿ**' ಅನ್ನುವ ವಾಕ್ಯದ ಪ್ರತಿಧ್ವನಿಯಾಗಿದೆ. ಈ ಸತ್ಯಗಳು ಸೂಫಿ ಸಾಧುಗಳಿಗೆ ತರ್ಕದಿಂದ

ದೊರಕಿದ್ದಲ್ಲ, ಅನುಭವದಿಂದ ದೊರಕಿದುದು. ಇಸ್ಲಾಮಿನ ಅನುಭಾವ ಪೂರ್ಣ ವ್ಯಾಖ್ಯಾನಕ್ಕೆ ಇವರ ಮನಸ್ಸನ್ನು ಬಾಗಿಸಿದುದು ಪ್ರಾಯಶಃ ನಿಯೋ ಪ್ಲೇಟೋನಿಸಮ್, ಹಿಂದೂ ಮತ್ತು ಬೌದ್ಧ ವಿಚಾರಧಾರೆಗಳಾಗಿದ್ದಿರ ಬಹುದು.

ಅನುಭಾವ ಮಾರ್ಗ ಅವರ ಶಾಸ್ತ್ರ ಕಟ್ಟಳೆಗಳಿಗೆ ವಿರೋಧವೆಂದು ಸೂಫಿಗಳು ಭಾವಿಸಲಿಲ್ಲ. ಶಾಸ್ತ್ರಮರ್ಯಾದೆಯನ್ನು ಉಳಿಸಿಕೊಳ್ಳು ವುದು ಅವರ ಜೀವನ ಮಾರ್ಗದ ಒಂದು ಅಂಗವೆಂದು ಬಗೆದರು. ಈಶ್ವರನ ಕಟ್ಟಳೆಗಳನ್ನು ಯಾವನು ಅರಿಯುತ್ತಾನೋ ಅವನು ಅದರ ಅಂತರಂಗ ಮತ್ತು ಬಹಿರಂಗ ರೂಪಗಳನ್ನು ಅರಿಯುತ್ತಾನೆ. ಈಶ್ವರ ನಿಯಮ ಕಟ್ಟಳೆ ಸತ್ಯದ ಬಾಹ್ಯರೂಪ. ನಾವು ಈಶ್ವರನ ಅನಂತ ಜೀವ ಸಾಗರದಲ್ಲಿ ಮುಳುಗಿದಾಗ ಅವನ ಸೃಷ್ಟಿಕಾರ್ಯದಲ್ಲಿ ಭಾಗಿಗಳಾಗುತ್ತೇವೆ. ಅವನೊಡನೆ ಸಮರಸವಾಗಿ ಬೆರೆತೂ ಸಹ ಈ ಬಾಹ್ಯ ಜಗತ್ತಿನಲ್ಲಿ ನಮ್ಮ ಕರ್ತವ್ಯಗಳನ್ನು ನೆರವೇರಿಸಲು ಇಳಿದುಬರುತ್ತೇವೆ.

## ೯. ಈಚಿನ ಒಲವುಗಳು

ವಿವಿಧ ಮತಗಳಲ್ಲಿ ಹುಟ್ಟಿದ ಅನೇಕ ಪ್ರಮುಖ ದಾರ್ಶನಿಕರು ಅಧ್ಯಾತ್ಮನಿಷ್ಠೆಯ ಈ ಮತಕ್ಕೆ ತಮ್ಮ ಒಲವನ್ನು ವ್ಯಕ್ತಪಡಿಸುತ್ತಿದ್ದಾರೆ. **ಅಪಿಯರೆನ್ಸ್ ಮತ್ತು ರಿಯಾಲಿಟಿ** (Appearence and Reality ಎಂಬ ತನ್ನ ಗ್ರಂಥದ ಪೀಠಿಕೆಯಲ್ಲಿ ಎಫ್. ಎಚ್. ಬ್ರಾಡ್ಲೆ ಈ ರೀತಿ ಹೇಳುತ್ತಾನೆ.

"ವಿಮರ್ಶಾತ್ಮಕವಾದ ಈ ಸ್ವತಂತ್ರ ಜಿಜ್ಞಾಸೆಯ ಬೆಳಕಿನ ಮುಂದೆ ಒಂದುಕಡೆ ಸಾಂಪ್ರದಾಯಿಕ ಮತ ಸಿದ್ಧಾಂತಗಳೂ ಮತ್ತೊಂದುಕಡೆ ಲೋಕಾಯತ ಮತಗಳೂ ಪ್ರೇತಗಳಂತೆ ಮಾಯವಾಗುತ್ತವೆ". "ಮತ ಒದಗಿಸಿಕೊಡುವ ಸತ್ಯಕ್ಕಿಂತಲೂ ಹೆಚ್ಚು ನಿಜವಾದುದು ಮತ್ತೊಂದಿಲ್ಲ. ಇದಕ್ಕೆ ಈ ರೀತಿಯ ಸಂಬಂಧಪಟ್ಟ ಸಂಗತಿಗಳನ್ನು ಬಾಹ್ಯವಸ್ತು ಗಳೊಡನೆ ಹೋಲಿಸುವುದು ಈ ವಿಷಯದೊಡನೆ ಹುಡುಗಾಟವಾಡಿದಂತೆ. ಮತಾನುಭಾವದಲ್ಲಿ ನಮಗೆ ಸಿಗುವ ಸತ್ಯಕ್ಕಿಂತಲೂ ಘನವಾದುದನ್ನು ಬಯಸುವವನು ಅವನು ಏನನ್ನು ಕೇಳುತ್ತಿದ್ದಾನೆಂಬುದನ್ನೇ ಅರಿಯದವನೆನ್ನ

ಬೇಕು" ಎಂದು ಬ್ರಾಡ್ಲೆ ಹೇಳುತ್ತಾನೆ. ಅವನ ದೃಷ್ಟಿಯಲ್ಲಿ ಸತ್ಯವೆನ್ನುವುದು ಅನುಭೂತಿ, ಆತ್ಮಾನಾತ್ಮ ಎಂಬ ವ್ಯತ್ಯಾಸಕ್ಕೂ ಹಿಂದಿನದು ಮತ್ತು ನಾವು ಅನುಭವವೆಂದು ಕರೆಯುವುದೆಲ್ಲದರ ಹಿಂದಿನ ಅನುಭವ. ತತ್ವ ಅನ್ನುವುದು ಸಾಪೇಕ್ಷ ಸಂಬಂಧಗಳನ್ನು ಮೀರಿದ ನಿರಪೇಕ್ಷ ಸತ್ಯ. ಈ ತತ್ವ ನಮ್ಮ ಇಡೀ ಸ್ವರೂಪವನ್ನು ತಣಿಸಬಲ್ಲದು.

ಬರ್ಗ್‌ಸನ್ ಪರದೊಡನೆ ಜೀವನ ಸಂಯೋಗವನ್ನು ಕುರಿತು ಉಲ್ಲೇಖಿಸಿದ್ದಾನೆ. ಜೀವ "ಅನಿರ್ವಚನೀಯವಾದ ಸಾನ್ನಿಧ್ಯಾನುಭವವನ್ನು ಪಡೆಯುತ್ತಾನೆ. ತದನಂತರ ಅಸೀಮ ಆನಂದ ಅವನನ್ನು ಆವರಿಸುತ್ತದೆ. ಎಲ್ಲರನ್ನೂ ಮುಳುಗಿಸುವ ಆನಂದ ಅಥವಾ ಪರವಶಗೊಳಿಸುವ ಭಾವಾವೇಶ ಅದು. ಈಶ್ವರ ಅಲ್ಲಿ ಇದ್ದಾನೆ ಮತ್ತು ಜೀವ ಅವನಲ್ಲಿ ಅಂತರ್ಗತ. ರಹಸ್ಯ ಇರುವುದಿಲ್ಲ, ರಹಸ್ಯವೆಲ್ಲ ಮಾಯವಾಗುತ್ತದೆ, ಸಮಸ್ಯೆಗಳೆಲ್ಲಾ ಮಾಯವಾಗುತ್ತವೆ. ಕತ್ತಲು ಹರಿಯುತ್ತದೆ, ಎಲ್ಲವೂ ಜ್ಯೋತಿರ್ಮಯವಾಗುತ್ತದೆ........ವಿಚಾರ ಮತ್ತು ವಿಷಯಗಳ ಅಂತರ ಇನ್ನಿಲ್ಲ. ಏಕೆಂದರೆ ಈ ಅಂತರವನ್ನು ಅಳಿಯುವ, ಅಂತರವನ್ನು ನಿರ್ಮಾಣ ಮಾಡುವ ಸಮಸ್ಯೆಗಳು ಮಾಯವಾಗಿವೆ. ಪ್ರಿಯ ಪ್ರೇಯಸಿ ಅನ್ನುವ ಭೇದವೂ ಅಳಿಯುತ್ತದೆ. ದೇವರು ಅಲ್ಲಿದ್ದಾನೆ ಮತ್ತು ಆನಂದವಂತೂ ಅಪರಿಮಿತ. ಬುದ್ಧಿಯಿಂದಲೂ ಭಾವನೆಯಿಂದಲೂ ಜೀವನು ಈಶ್ವರನಲ್ಲಿ ಲೀನನಾಗುತ್ತಾನೆ"ಪ್ರಾಪಂಚಿಕ ಚಿಂತೆಗಳಿಂದ ಹಠಾತ್ತನೆ ಪಾರಾಗುತ್ತೇವೆ. ಅನುದಿನ ನಾವು ಅರಿಯದೇ ಅನುಭವಿಸುತ್ತಿದ್ದ ಜೀವನದ ಹೊರೆ ಆತಂಕಗಳು ಕಳಚಿ ನಮ್ಮನ್ನು ಹಗುರಮಾಡುತ್ತವೆ. ಅವಿಚಾರಪೂರ್ವಕವಾದ ನಂಬಿಕೆ ಅಪನಂಬಿಕೆಗಳ ಅಪಾಯದಿಂದ ಪಾರಾಗುತ್ತೇವೆ. "ದೇವರಿಗಾಗಿ ಹಂಬಲಿಸುವ" ಜೀವನನ್ನು ಐತಿಹಾಸಿಕ ಸಂಪ್ರದಾಯಗಳಿಂದ ವಿಮುಕ್ತಗೊಳಿಸದಿದ್ದರೆ ಮತ ಬರಡಾಗಿ ನಿರ್ಜೀವವಾಗಿ ಉಳಿಯುತ್ತದೆ. ಇಂದು ಜೀವಂತವಾಗಿರುವ ಮತಧರ್ಮಗಳಲ್ಲೆಲ್ಲ ಈ ಹೊಸ ಹುರುಪು ಹೊಸ ಚೈತನ್ಯ ವೃದ್ಧಿಯಾಗುತ್ತಿದೆ.

ನಿಜವಾದ ಮತ ಹೊರಗಿನಿಂದ ನಮಗೆ ಬರುವುದಿಲ್ಲ. ಗ್ರಂಥಗಳಿಂದ ಅಧ್ಯಾಪಕರಿಂದ ದೊರಕುವುದಿಲ್ಲ. ಅದು ಆತ್ಮನ ಅಂತರಾಳದಿಂದ ಹೊರ

ಹೊಮ್ಮುವ ಬಯಕೆ, ಅಂತರಂಗದ ವಿಕಾಸ. ಜೀವಂತ ಅಂತಃಸತ್ವದಿಂದ ರಚಿಸಿ ಬಂದದ್ದು. ಈ ದೃಷ್ಟಿಯನ್ನು ತಾಳಿದವರೆಲ್ಲ ಜ್ಞಾನಿಗಳು. ಇವರು ವಿವಿಧ ದೇಶಗಳವರಾದರೂ ಒಂದು ಕುಟುಂಬಕ್ಕೆ ಸೇರಿದವರು. ಇವರು ಸ್ವತಂತ್ರವಾದ ಬಂಧನರಹಿತವಾದ ಒಂದು ಸಂಘಕ್ಕೆ ಸೇರಿದವರು. ಅಧ್ಯಾತ್ಮದ ಅಗೋಚರ ದೇವಮಂದಿರಕ್ಕೆ ಸೇರಿದವರು. ಇದರ ಸದಸ್ಯತ್ವ ಇಡೀ ಲೋಕಕ್ಕೆ ವ್ಯಾಪಿಸಿದ್ದು. ಮಾನವನು ತನಗೆ ಸಾಧ್ಯವಾದದ್ದೆಲ್ಲವನ್ನೂ ಈ ಪ್ರಪಂಚದಲ್ಲೇ ಸಾಧಿಸಬಲ್ಲನೆಂದು ಅವರು ಅರಿಯುತ್ತಾರೆ. ಅವರು ಮಾನವ ಸಾಧನೆಗೆ ನಿಲುಕಬಹುದಾದದ್ದನ್ನೆಲ್ಲ ಈ ಪ್ರಪಂಚದಲ್ಲೇ ಪಡೆಯುತ್ತಾರೆ. ಅವರ ಜೀವನ ಕಪಟ ರಹಿತವಾದುದು, ಪ್ರಮಾಣ ಬುದ್ಧವಾದುದು, ಸತ್ಯ ನಿಷ್ಠೆಯುಳ್ಳದ್ದು ಮತ್ತು ಇಡೀ ಸೃಷ್ಟಿಯಲ್ಲಿ ಪ್ರೇಮವನ್ನು ತಾಳಿದುದು.

೬.

# ಮತದ ಸತ್ಯ ಮತ್ತು ಸಂಕೇತ

## ೧. ತತ್ವನಿರೂಪಣೆ

ಅಲ್ಪಸ್ವಲ್ಪ ವ್ಯತ್ಯಾಸಗಳಿದ್ದರೂ ವಿವಿಧ ಮತಗಳ ಜ್ಞಾನಿಗಳ ಸ್ವಾನುಭವದಲ್ಲಿ ಪಾರಮಾರ್ಥಿಕ ಜೀವನಕ್ಕೆ ಸಂಬಂಧಪಟ್ಟ ಹಾಗೆ ಅನೇಕ ರೀತಿಯ ಆಶ್ಚರ್ಯಕಾರಕ ಸಾದೃಶ್ಯಗಳನ್ನು ಕಾಣುತ್ತೇವೆ. ಕುಲ ಮತ್ತು ಭೂಗೋಳ ಸಂಬಂಧವಾದ ವೈಷಮ್ಯಗಳು ಇದಕ್ಕೆ ಅಸಂಗತವಾಗುತ್ತವೆ. ಇದರಲ್ಲಿ ಕಾಣುವ ವ್ಯತ್ಯಾಸವು ಅಲ್ಪ. ಆಧ್ಯಾತ್ಮಿಕ ಅಪರೋಕ್ಷಾನುಭೂತಿ ಒಂದು ಮಾನಸಿಕವೃತ್ತಿ. ಇದರ ಆಧಾರದಮೇಲೆ ಏರ್ಪಟ್ಟ ತಾತ್ವಿಕ ಸಿದ್ಧಾಂತದಿಂದ ಅದು ಸ್ವತಂತ್ರವಾದದ್ದು. ಆಧ್ಯಾತ್ಮಿಕ ಅನುಭವದ ಆಧಾರದ ಮೇಲೆ ಹುಟ್ಟಿದ ಸಿದ್ಧಾಂತದ ಸತ್ಯಾಸತ್ಯತೆ ಈ ಅನುಭವದ ನಿಜ ಸ್ವರೂಪವನ್ನು ಬದಲಿಸಲಾರದು. ಆದಜೂ ಈ ಅನುಭೂತಿಯಲ್ಲಿ ಒಂದು ತಾತ್ವಿಕ ಮೌಲ್ಯವಿದೆ. ಪರತತ್ವ, ಜೀವ, ಜಗತ್ತು (ಇವುಗಳಿಗೆ ಸಂಬಂಧ ಪಟ್ಟಂತೆ) ಮತ್ತು ಪರತತ್ವದೊಡನೆ ಸಮರಸ ಪಡೆಯಲು ಮಾರ್ಗ ಇವುಗಳ ವಿಷಯವಾಗಿ ಕೆಲವು ತಾತ್ವಿಕ ಸಿದ್ಧಾಂತಗಳು ಈ ಅನುಭವದಲ್ಲಿ ಅನ್ವಯವಾಗಿವೆ. ಇವುಗಳ ವರ್ಣನೆಗಳು ಮತ್ತು ಉಚ್ಚಾರ ನಾನಾವಿಧ ; ಒಂದೇ ಮತದವರಲ್ಲಿಯೂ ಈ ವೈವಿಧ್ಯವಿದೆ. ಆದರೂ ಹಿಂದೂ ಜ್ಞಾನಿಗಳಲ್ಲಾಗಲಿ, ಬೌದ್ಧ ಗುರುಗಳಲ್ಲಾಗಲಿ, ಸಾಕ್ರೆಟಿಸ್, ಪ್ಲೇಟೋ, ಅರಿಸ್ಟಾಟಲ್ ಮತ್ತು ಪ್ಲೋಟೈನಸ್ ಮೊದಲಾದ ಗ್ರೀಕ್ ದಾರ್ಶನಿಕರಲ್ಲಾಗಲೀ ಕ್ರೈಸ್ತ ಅನುಭಾವಿಗಳಲ್ಲಾಗಲೀ ಸೂಫಿಗಳಲ್ಲಾಗಲೀ ಈ ಅನುಭವದ ಸಾದೃಶ್ಯ ಗಮನಾರ್ಹವಾದದ್ದು.

ಅನೇಕ ಜ್ಞಾನಿಗಳು ಮೌನ ಆರಾಧನೆಯಲ್ಲಿಯೇ ತೃಪ್ತರಾಗುತ್ತಾರೆ. ಶಬ್ದಜಾಲದಲ್ಲಿ ರಮಿಸಲೊಪ್ಪದೆ ಮಾತಿನ ಮಾಲೆಯಲ್ಲಿ ಅದನ್ನು ವರ್ಣಿಸಲು ನಿರಾಕರಿಸುತ್ತಾರೆ. ಶಬ್ದದ ಶಬ್ದವಿಲ್ಲದೆ ಭಗವಂತನನ್ನು ಬಣ್ಣಿಸುತ್ತಾರೆ. ವ್ಯಕ್ತಪಡಿಸುತ್ತಾರೆ. ಗುರು ತನ್ನ ಶಿಷ್ಯನಾದ ಬಾಷ್ಕಲಿಗೆ "ಮೌನವೇ ಆತ್ಮ" **ಶಾಂತೋಽಯಂ ಆತ್ಮಾ** ಎಂದು ಹೇಳಿದ. ಸಂತ ಅಗಸ್ಟಿನ್

"ಈಶ್ವರ ಅನಿರ್ವಚನೀಯವೆಂದು ಹೇಳುವುದೂ ಸರಿಯಲ್ಲ, ಏಕೆಂದರೆ ಅದನ್ನು ಹೇಳುವುದೂ ಒಂದು ವರ್ಣನೆಯೇ ಆಯಿತು. ಅದು ಶುದ್ಧ ಮೌನ, ಶಬ್ದಾತೀತವಾದ ಶೂನ್ಯ." ಎಂದು ಹೇಳಿದ. "ನೀನು ಪರಿಪೂರ್ಣನಾಗಲು ಬಯಸುವುದಾದರೆ, ಈಶ್ವರನನ್ನು ಕುರಿತು ಬಗುಳಬೇಡ" ಎನ್ನುತ್ತಾನೆ ಎಕ್‌ಹಾರ್ಟ್.

ಮತಾನುಭವದಲ್ಲಿ ಪರತತ್ವದ ಜ್ಞಾನವೂ ಇದೆ, ಈಶ್ವರನೊಡನೆ ಸಮಾಗಮವೂ ಇದೆ. ಇವು ಪರಸ್ಪರ ವಿರೋಧವಲ್ಲ, ಭಾರತದ ವಿಖ್ಯಾತ ಅದ್ವೈತ ಸಿದ್ಧಾಂತ ಪ್ರತಿಪಾದಕರಾದ ಶಂಕರರು ಬ್ರಹ್ಮ ಸಾಯುಜ್ಯ ಬ್ರಹ್ಮಾನುಭಾವಗಳೆರಡನ್ನೂ ಕುರಿತು ಹೇಳಿದರು. ಹಳೆ ಮತ್ತು ಹೊಸ ಒಡಂಬಡಿಕೆ (Testament) ಗಳು ಈ ಸಮರಸ ಅನುಭಾವವನ್ನೂ ವ್ಯಕ್ತಿಗಳ ಮಾತುಗಳಲ್ಲಿ ವಿವರಿಸುತ್ತವೆ. ಭಾರತೀಯಮತಗಳಲ್ಲಿ ವ್ಯಕ್ತಿಗತವಾದ ಅನುಭಾವ ಕಂಡುಬಂದರೂ ನಿರಪೇಕ್ಷ ಸತ್ಯವಾದ ಬ್ರಹ್ಮತತ್ವಕ್ಕೇ ಹೆಚ್ಚು ಪ್ರಾಶಸ್ತ್ಯ ಕೊಡಲಾಗಿದೆ.

## ೨. ತತ್ವಮಸಿ

ಪ್ರತಿ ಜೀವನೂ ಬ್ರಹ್ಮಕ್ಕೆ ಸಂಬಂಧಪಟ್ಟಿದ್ದಾನೆಂದು ಎಲ್ಲ ಮತಗಳ ಜ್ಞಾನಿಗಳೂ ಒಪ್ಪುತ್ತಾರೆ. ಬ್ರಹ್ಮನೇ ಆತ್ಮನ ಮೂಲಾಧಾರ, ಜೀವ ಬ್ರಹ್ಮರ ಸಂಗಮ ಸ್ಥಾನ. ಎಲ್ಲ ಜ್ಞಾನದ, ಸೌಂದರ್ಯದ, ಸೌಜನ್ಯದ, ಸರ್ವವ್ಯಾಪಕವಾದ ಎಲ್ಲ ಭಾವನೆಗಳ ಉಗಮ ಮತ್ತು ಆಧಾರ. ಅಂತರಾಳದ ಅಂತರಾತ್ಮನು ಬ್ರಹ್ಮನಲ್ಲಿ ಐಕ್ಯಗೊಂಡಿರುವುದರಿಂದಲೇ ಜೀವ ಬ್ರಹ್ಮನನ್ನು ಅರಿಯಲು ಸಾಧ್ಯ, ಇಲ್ಲಿ ಜ್ಞೇಯ ಜ್ಞಾನಗಳ ಐಕ್ಯವನ್ನು ಕಾಣುತ್ತೇವೆ. ಆತ್ಮ ಮತ್ತು ಬ್ರಹ್ಮರಲ್ಲಿ ಪೂರ್ಣ ಸಮರಸವಿದೆ. ಮಾನವ ಪಿಂಡಾಂಡ ಬ್ರಹ್ಮಾಂಡದ ಪ್ರತಿಬಿಂಬ.

ಇಲ್ಲಿ ಎಲ್ಲ ಶಕ್ತಿಗಳು ಅವ್ಯಕ್ತವಾಗಿವೆ. ವಿಶ್ವವೂ ಇವನ ಮೂಲಕವೇ ತನ್ನ ಸೃಜನಾತ್ಮಕ ಕಾರ್ಯವನ್ನು ಪೂರೈಸಿಕೊಳ್ಳುತ್ತದೆ. ಮಾನವನು ತನ್ನ ಜಗತ್ತನ್ನೂ ತನ್ನನ್ನೂ ತನ್ನಲ್ಲಿರುವ ಈ ಸೃಜನಾತ್ಮಕ ಶಕ್ತಿಗಳನ್ನೂ ಅನುಸರಿಸಿ ರೂಪಿಸಿಕೊಳ್ಳಬೇಕಾಗಿದೆ.

ಉಪನಿಷತ್ತುಗಳು "ತತ್ವಮಸಿ" ಎಂದೂ ಬುದ್ಧ ಪ್ರತಿಯೊಬ್ಬ

ವ್ಯಕ್ತಿಯೂ ಬುದ್ಧನಾಗಬಲ್ಲ, ಬೋಧಿಸತ್ವನಾಗಬಲ್ಲ ಎಂದೂ ಯಹೂದ್ಯರು "ಮಾನವನ ಆತ್ಮ ಭಗವಂತನ ಸೊಡರು" ಎಂದೂ, ಏಸು ತನ್ನ ಶ್ರೋತೃಗಳಿಗೆ "ದೇವರ ರಾಜ್ಯ ನಿಮ್ಮೊಳಗೇ ಇದೆ" ಎಂದೂ ಮಹಮ್ಮದ್ "ನಮ್ಮ ಕಂಠದೊಳಗಿನ ರಕ್ತನಾಳಕ್ಕಿಂತಲೂ ದೇವರು ನಮಗೆ ಹತ್ತಿರವಾಗಿದ್ದಾನೆ" ಎಂದೂ ಬೋಧಿಸಿದರು. ಜೀವನದ ಅತಿಮುಖ್ಯವಸ್ತು ಮಾನವನ ಮನಸ್ಸು ಹೃದಯಗಳ ಅಂತರಾಳದಲ್ಲೇ ಉಪಸ್ಥಿತವಾಗಿರುವುದಲ್ಲದೆ ಅವನಿಗೆ ಬಾಹ್ಯವಾದ ಯಾವ ವಸ್ತುವಿನಲ್ಲೂ ಇಲ್ಲ ಎಂದೇ ಈ ಮಹನೀಯರೆಲ್ಲರ ಅಭಿಪ್ರಾಯ.

### 3. ಮತ ಸಂಕೇತ (Religious Symbolism)

ಹಿಂದೂ ದಾರ್ಶನಿಕರು ಶ್ರುತಿ ಅಥವಾ ವೇದಕ್ಕೂ, ಸ್ಮೃತಿ ಅಥವಾ ಆಗಮಕ್ಕೂ ವ್ಯತ್ಯಾಸವನ್ನು ಗಮನಿಸುತ್ತಾರೆ. ಶ್ರುತಿ ಅಪೌರುಷೇಯ. ಸ್ಮೃತಿಯ ಆಧಾರ ತರ್ಕ, ಮಿಮಾಂಸೆ. ಸೃಷ್ಟಿಮಾಡಲಾಗದ ಸ್ವಯಂಭೂ ಆತ್ಮ ಸಾಕ್ಷಾತ್ಕರಿಸಿಕೊಂಡ ಸತ್ಯದ ನೇರವಾದ ಉಚ್ಚಾರ ಶ್ರುತಿ. ಈ ಉಚ್ಚಾರಗಳು ವ್ಯಕ್ತ್ಯತೀತ, ಸರ್ವವ್ಯಾಪಕ, ದಿವ್ಯ. ಅವು ಅಪರೋಕ್ಷ, ತಾರ್ಕಿಕವಲ್ಲ. 'ಅನುಭಾವ' ಅಥವಾ ಸನಾತನ ಸತ್ಯದಲ್ಲಿ ಸಚೇತನ ಅನ್ವಯ, ಪರೋಕ್ಷವಾದ ಸಿದ್ಧಾಂತ ರೂಪದಲ್ಲಿ ನಮಗೆ ಒದಗಿಸಲ್ಪಟ್ಟ ಮತಜ್ಞಾನಕ್ಕಿಂತ ತೀರ ಭಿನ್ನ. ಅಖಂಡ ತತ್ವದರ್ಶನದಲ್ಲಿ ವ್ಯಕ್ತಿ ಮತ್ತು ಜ್ಞಾನ ಇವುಗಳ ಭೇಧ ಅಳಿದು ತನ್ನ ಅಂತರಾತ್ಮನ ದಿವ್ಯ ತತ್ವದಲ್ಲೇ ವ್ಯಕ್ತಿ ಬೆರೆತು ಹೋಗುತ್ತಾನೆ. ಜ್ಞಾತೃಜ್ಞೇಯಗಳು ಒಂದಾದ ಈ ಪರಿಸ್ಥಿತಿಯಲ್ಲಿ ನಿಶ್ಚಯಾತ್ಮಕ ಜ್ಞಾನ ಪರಿಪೂರ್ಣ ರೂಪವನ್ನು ತಾಳುತ್ತದೆ. ಇದೇ ಜ್ಞಾನ,, ಜೀವ-ಶಿವ ಗಳ ಅವಿಚ್ಛಿನ್ನ ಐಕ್ಯ.

ಇವರ ವಿವರಣೆಯಲ್ಲಿ ಸಂಶಯಗಳ ವಿಮರ್ಶೆ ಇಲ್ಲ. ಆಕ್ಷೇಪಗಳಿಗೆ ಸಮಾಧಾನ ಹೇಳುವದಿಲ್ಲ. ಯಾವುದು ಸ್ವಯಂ ಪ್ರಮಾಣವೋ ನಿಶ್ಚಯಾತ್ಮಕವೋ ಅದನ್ನು ಕುರಿತು ಹೇಳುತ್ತದೆ. ಇದನ್ನು ಹೇಳುವಾಗ ಕೆಲವು ಸಂಕೇತ ಸಾಧನೆಗಳನ್ನು ಅವಲಂಬಿಸುತ್ತದೆ. ಈ ಸಂಕೇತಗಳು ಪಾಠಕನಲ್ಲಿ ಅಥವಾ ಶ್ರೋತೃವಿನಲ್ಲಿ ಸುಪ್ತವಾಗಿ ಸಿದ್ಧವಾದ ಜ್ಞಾನವನ್ನು ಎಚ್ಚರಗೊಳಿಸುತ್ತದೆ. ಅಪರೋಕ್ಷಜ್ಞಾನ ಸಾಂಕೇತಿಕ ಮತ್ತು ವಿವರಣಾತ್ಮಕ.

ಇದನ್ನು ವಿವರಿಸಲು ಸಂಕೇತವಾಗಿ ತಾರ್ಕಿಕ ರೀತಿಗಳನ್ನು ಉಪಯೋಗಿಸಿಕೊಳ್ಳುತ್ತದೆ. ಇದು ನಿಶ್ಚಯಾತ್ಮಕವಾದ ಪರಿಪೂರ್ಣಜ್ಞಾನದ ಅನುವಾದ ಮಾತ್ರ.

ಹಿಂದೂ ಪವಿತ್ರಗ್ರಂಥಗಳಾದ ವೇದಗಳನ್ನು ಸನಾತನವೆಂದು ವರ್ಣಿಸಿದಾಗ ಪರತತ್ತ್ವದ ಅಂತರ್ದರ್ಶನ ಕಾಲತತ್ವವನ್ನು ಮೀರಿದುದು ಎಂದರ್ಥ. ವರ್ಣನೆಯ ವೈವಿಧ್ಯದಿಂದ ಈ ದರ್ಶನ ಪರಿವರ್ತನಗೊಳ್ಳುವುದಿಲ್ಲ. ಯಹೂದ್ಯರು ಮೋಸಸ್-ಸಂಪ್ರದಾಯ ಅವಿನಾಶಿ ಎಂದಾಗ ಅವರು ಈ ಸನಾತನ ಜ್ಞಾನವನ್ನೇ ತಮ್ಮ ಮನಸ್ಸಿನಲ್ಲಿ ನೆನೆಯುತ್ತಾರೆ. ಮೈಮೋನಿಡಿಸ್ ಪ್ರಕಾರ, ‘ ತೋರಾ ’ ಶಾಶ್ವತ ತತ್ತ್ವ. ಅದಕ್ಕೆ ವೃದ್ಧಿಯೂ ಇಲ್ಲ ಕ್ಷಯವೂ ಇಲ್ಲ. “ನಾನು ನಿಮಗೆ ಸತ್ಯವಾಗಿ ಹೇಳುತ್ತೇನೆ ಅಂತರಿಕ್ಷ ಪೃಥ್ವಿಗಳು ಅಳಿಯುವವರೆಗೂ ಇದರಲ್ಲಿ ಒಂದಿಷ್ಟೂ ನಾಶಹೊಂದುವುದಿಲ್ಲ, ಎಲ್ಲವೂ ಪೂರ್ಣತೆ ಪಡೆಯುವವರೆಗೆ ಇದು ಇದ್ದಂತೆಯೇ ಇರುತ್ತದೆ.” “ಈಶ್ವರನು ಬೇರೆ ರೀತಿಯಲ್ಲಿ ಸಂಕಲ್ಪಿಸಿದ ಹೊರತು, ಎಂದಿನವರೆಗೆ ಅಂತರಿಕ್ಷ ಭೂಮಿಗಳು ಉಳಿದಿರುವವೋ ಅಲ್ಲಿನವರೆಗೆ ಅವು ಉಳಿದಿರುತ್ತವೆ.” ಮಹಮ್ಮದ್ ಕುರಾನಿನ ಸಂಪಾದಕ. ಅದರ ತಿರುಳು ನಿತ್ಯವಾದದ್ದು, ಕಲ್ಪಿತವಾದದ್ದಲ್ಲ. ದೇವರ ಸ್ವರೂಪದಲ್ಲಿ ಅದು ನೆಲೆಸಿದೆ. ಅದು ಗೇಬ್ರಿಯಲ್ ದೇವದೂತನು ಮಹಮ್ಮದ್ ಪೈಗಂಬರ್‌ಗೆ ಅರುಹಿದ್ದು. ಇದರಲ್ಲಿ ಕಾಲಾತೀತವಾದದ್ದು ಅದರ ಗ್ರಾಂಥಿಕ ಲಿಖಿತವಲ್ಲ, ಎಲ್ಲಕಾಲದಲ್ಲಿಯೂ ಜ್ಞಾನಿಗಳಿಗೆ ಗೋಚರವಾಗುವ ಪೂರ್ಣ ಪ್ರಜ್ಞೆ.

ಮತ ಸಂಬಂಧವಾದ ಸಂಕೇತ ಪ್ರತೀಕಗಳ ಮೂಲಕ ವಿವಿಧ ರೀತಿಯಲ್ಲಿ ಪರತತ್ವದ ಕಲ್ಪನೆ ಅಭಿವ್ಯಕ್ತವಾಗಿದೆ. ನಮ್ಮ ಅನುಭವಕ್ಕೆ ವೇದ್ಯವಾದದ್ದನ್ನು ವಾಕ್ಯಗಳಲ್ಲಿ ವ್ಯಕ್ತಪಡಿಸುತ್ತೇವೆ. ಈ ವಾಕ್ಯಗಳು ಸಾಂಕೇತಿಕ ಮತ್ತು ವಿವರಣಾತ್ಮಕ. ಈ ಅನುಭವವನ್ನು ಅನುಭವಪಡೆಯದವರಿಗೆ ವಿವರಿಸುವಾಗ, ಅವರ ಸಾಮಾನ್ಯ ಅನುಭವದ ಮಾತುಗಳನ್ನೇ ಬಳಸಿಕೊಳ್ಳುತ್ತೇವೆ. ನಿಜವಾದ ಸಂಕೇತ ಕನಸಲ್ಲ ಅಥವಾ ನೆರಳಲ್ಲ. ಅದು ಅಗೋಚರವಾದುದರ ಜೀವಂತ ಅಭಿವ್ಯಕ್ತಿ. ವೇದದ ಆರ್ಯರು ಮತ್ತು ಜರತುಸ್ಟ್ರನ ಅನುಯಾಯಿಗಳು ಅಗ್ನಿಯನ್ನು ಪರತತ್ವದ ಪ್ರತೀಕವೆಂದು ಕಾಣುತ್ತಾರೆ.

ಅಚ್ಯುತವಾದ ಪರತತ್ವದ ತೇಜಸ್ಸು ಜ್ವಲಿಸುವ ಅಗ್ನಿಯ ರೂಪವನ್ನು ತಾಳುತ್ತದೆ. ಉಪನಿಷತ್ತು ಇದನ್ನು 'ಜ್ಯೋತಿಷಾಮ್ ಜ್ಯೋತಿಃ' ಎಂದು ಕರೆಯುತ್ತದೆ. ಬಾಹೆಮ್ ಮತ್ತು ವಿಲಿಯಮ್ ಲಾ ಇದನ್ನು ದಿವ್ಯಜ್ಯೋತಿ ಎಂದು ಕರೆಯುತ್ತಾರೆ.

ಜೀವ ಈಶ್ವರ ಸಂಬಂಧವನ್ನು ವರ್ಣಿಸಲು ಮಾನವ ಸಮೂಹದಲ್ಲಿ ಬಳಕೆಯಲ್ಲಿರುವ ಸಂಬಂಧವನ್ನು ಬಳಸಿಕೊಳ್ಳುತ್ತೇವೆ. ಈಶ್ವರನನ್ನು ತಂದೆ ಎಂದು ವೇದಗಳೂ ಉಪನಿಷತ್ತುಗಳೂ ವರ್ಣಿಸುತ್ತವೆ. ಏಸುವಿನ ಬೋಧೆಯಲ್ಲಿ ಇದು ಹೆಚ್ಚು ಸ್ಪಷ್ಟವಾಗಿ ಕಾಣುತ್ತದೆ. ಗೆತ್ಸಿಮೇನ್‌ನಲ್ಲಿ ದುಃಖತಪ್ತನಾದ ಏಸು, "ಅಬ್ಬಾ, ತಂದೆಯೇ" ಎಂದು ಕೂಗಿದ. ಮತ್ತೊಂದು ಮಾತನ್ನು ಅವನು ಹೇಳಿದನೆಂದು ಪ್ರತೀತಿ ಇದೆ. "ತಂದೆಯೇ ಅವರನ್ನು ಕ್ಷಮಿಸು .......ತಂದೆಯೇ, ನಿನ್ನ ಕರಗಳಿಗೆ ನನ್ನ ಆತ್ಮವನ್ನು ಒಪ್ಪಿಸುವೆ." ಅವನು ತನ್ನ ಶಿಷ್ಯರನ್ನು ಕುರಿತು "ನೀವು ಪ್ರಾರ್ಥನೆ ಮಾಡುವಾಗಲೆಲ್ಲಾ ನನ್ನ ತಂದೆಯೇ ಎನ್ನಿರಿ." ಎಂದು ಹೇಳಿದ.

ಹೀಗೆ ವಿವಿಧವಾದ ಸಾಂಕೇತಿಕ ರೂಪಗಳು ಪರತತ್ವದ ಅಪರಿಮಿತ ಸ್ವರೂಪದ ವಿವಿಧ ಅಂಶಗಳನ್ನು ಚಿತ್ರಿಸುತ್ತವೆ.

ಸಂಕೇತಗಳ ವೈವಿಧ್ಯಕ್ಕೆ ಕಾರಣ ಅನುಭವದ ಸ್ವಸ್ವರೂಪವಲ್ಲ. ಮತ ಮತ್ತು ತತ್ವಗಳು ವಿವರಿಸುತ್ತಿದ್ದ ಕಾಲ ಮತ್ತು ದೇಶಗಳ ವೈವಿಧ್ಯವೇ ಇದಕ್ಕೆ ಕಾರಣ. ಜ್ಞಾನಿಯ ಆಕಾಂಕ್ಷೆಗಳಿಗೆ ಇದು ಬಣ್ಣ ಕೊಡುತ್ತದೆ. ಈ ಹಿನ್ನೆಲೆಯಲ್ಲಿ ತಾನು ಕಂಡ ಬೆಳಕನ್ನುಅವನು ವಿವರಿಸುತ್ತಾನೆ.

"ಜೀವನ, ವಿವಿಧವರ್ಣದ ಗಾಜಿನ ಗೋಳದಂತೆ ನಿತ್ಯಜೀವನದ ಶುಭ್ರ ಶ್ವೇತ ಪ್ರಕಾಶವನ್ನು ಮಲಿನಗೊಳಿಸುತ್ತದೆ". ಎನ್ನುತ್ತಾನೆ ಕವಿ ಷೆಲ್ಲಿ.

ಮತ್ತೊಬ್ಬ ಕವಿ ಹೀಗೆ ಹೇಳುತ್ತಾನೆ :

"ಉಜ್ವಲ ಪ್ರವಾದಿ ಮತ್ತು ದಿವ್ಯೋನ್ಮತ್ತ ಕವಿ, ಇವರು ಭಗವಂತನ ದಿವ್ಯಗಾನ ಮಿಡಿವ ವೀಣೆ. ಅದರ ರಾಗದ ಮೂಲಕವೇ ಆ ದಿವ್ಯ ಗಾನ ಮಿಡಿದೀತು."

ಸೂಕ್ಷ್ಮ ಆಂತರಿಕ ಅನುಭವವನ್ನು ಇತರರಿಗೆ ಹೇಳಿದಾಗ, ವಿವರಿಸಿದಾಗ "ವೀಣೆ ಮತ್ತು ಅದರ ನಾದ" ಇವಕ್ಕೆ ಕ್ರಮ ಮತ್ತು ಆಕಾರ

ಕೊಡುತ್ತದೆ.

ಐತಿಹಾಸಿಕ ರೂಪಗಳಲ್ಲಿ ವ್ಯಕ್ತಗೊಂಡ ವಿಶೇಷ ಸಿದ್ಧಾಂತಗಳ ಹಿಂದೆ ಅಡಗಿರುವ ಸಾಮಾನ್ಯ ತತ್ವಗಳನ್ನೂ ಅವುಗಳ ಸಾಮ್ಯವನ್ನೂ ಮರೆತು ಅವುಗಳಲ್ಲಿ ಕಾಣುವ ವೈಷಮ್ಯಗಳನ್ನೇ ಎತ್ತಿ ಹಿಡಿಯುವುದು ತಪ್ಪು. ಆಧ್ಯಾತ್ಮಿಕ ಪರಿಪೂರ್ಣತೆಯ ನಿಚ್ಚಣಿಕೆಯನ್ನು ಮೇಲೆ ಮೇಲೆ ಹತ್ತುತ್ತಾ ಹೋದಹಾಗೆಲ್ಲಾ ಸೈದ್ಧಾಂತಿಕ ವೈಷಮ್ಯಗಳು ಮರೆಯಾಗುತ್ತಾ ಹೋಗುವುವು. ಕೆಲವು ಗೌಣವಾದ ವಿವರಗಳನ್ನು ಬದಿಗೊತ್ತಿದರೆ ಆಗ ಎಲ್ಲ ಜ್ಞಾನಿಗಳೂ ಪರತತ್ವವನ್ನು ಕುರಿತು ಒಂದೇ ರೀತಿಯಲ್ಲಿ ಪ್ರತಿಪಾದನೆ ಮಾಡುತ್ತಾರೆಂಬುದು ವೇದ್ಯವಾಗುತ್ತದೆ.

ಸಂಜ್ಞೆಗಳು ಮತ್ತು ಸಿದ್ಧಾಂತಗಳು ನಿಷ್ಕೃಷ್ಟನಾದುವಲ್ಲ. ಪ್ರಾಚ್ಯ ಮತಗಳ ಪ್ರಕಾರ ತತ್ವವಿವರಣೆಯ ವೈವಿಧ್ಯಗಳು ವಿಶ್ವತತ್ವದ ನಿಜಸ್ವರೂಪವನ್ನು ಬದಲಿಸಲಾರವು, ಹೇಗೆ ಸ್ವಚ್ಛಶ್ವೇತ ಜ್ಯೋತಿಯ ಸ್ವರೂಪವನ್ನು ವಿವಿಧ ವರ್ಣಗಳು ಬದಲಿಸಲಾರವೋ ಹಾಗೆ. ಪ್ರತೀಚ್ಯ ಮತಧರ್ಮಗಳು ಯಾವುದೋ ಒಂದು ತತ್ವನಿರ್ಣಯವನ್ನು ಅದೇ ಕೊನೆಯದೆಂದೂ ಪೂರ್ಣವಾದದ್ದೆಂದೂ ಇನ್ನಿತರ ರೀತಿಯ ನಿರ್ಣಯಗಳೆಲ್ಲಾ ಅಸತ್ಯವೆಂದೂ ನಂಬುವ ಒಲವು ಉಳ್ಳದ್ದಾಗಿವೆ. ಭಾರತದಲ್ಲಿ ಯಾದರೋ ಪ್ರತಿ ತತ್ವಪ್ರತಿಪಾದನೆಯೂ ಏಕಪಕ್ಷೀಯ ದರ್ಶನ ಮಾತ್ರವೆಂಬ ಭಾವನೆ ಇದೆ. ಒಂದೇ ಅನುಭವವನ್ನು ಕಾಣುವ ದೃಷ್ಟಿಗಳು ಅನೇಕ. ಈ ದರ್ಶನಗಳು ವಿವಿಧ ದೃಷ್ಟಿಕೋಣಗಳು; ಆದರೆ ಪರಸ್ಪರ ವಿರೋಧವಾದವುಗಳಲ್ಲ. ಅವು ಅಧ್ಯಾತ್ಮ ಸಾಕ್ಷಾತ್ಕಾರದ ಮಾರ್ಗವನ್ನು ತೋರಿಸುವ ಕೈಮರಗಳು. ಮತಧರ್ಮಗಳಲ್ಲಿ ಸತ್ಯವನ್ನು ವಿವಿಧ ಸಮೂಹಗಳವರು ವಿವಿಧ ರೀತಿಯಲ್ಲಿ ನೋಡುವುದು ಅಂತಿಮ ಒಂದೇ ಎಂಬುದನ್ನು ನಿರಾಕರಿಸುವುದಕ್ಕಲ್ಲ. ಉತ್ಕೃಷ್ಟ ಧರ್ಮಗಳಲ್ಲಿ ಪರಸ್ಪರ ಸಾಮ್ಯಗಳಿವೆ ಎಂಬುದೂ ಅವುಗಳ ವೈವಿಧ್ಯವನ್ನು ಒಂದುಗೂಡಿಸುವ ರಹಸ್ಯಮಯ ಈಶ್ವರತತ್ವವು ಅದರ ಪ್ರೇರಕವೆಂಬ ನಂಬಿಕೆಯೂ ಅಂಗೀಕಾರಾರ್ಹ. ಮತದ ವಿಷಯದಲ್ಲಿ ಜ್ಞಾನಿಗಳ ಮತ್ತು ಸಂತರ ವಾಕ್ಯಗಳನ್ನು ನಂಬಬೇಕು. ಪ್ರತಿ ವ್ಯಕ್ತಿಗೂ ಅವನ ಬೆಳವಣಿಗೆಗೆ ತಕ್ಕಂತೆ ಆಧ್ಯಾತ್ಮಿಕ ಸಾಧನಕ್ರಮ ಏರ್ಪಡಬೇಕು ಎಂಬ ನಂಬಿಕೆ ಹಿಂದೂ ಧರ್ಮದ

**ಅಧಿಕಾರ ಭೇದ** ಮತ್ತು **ಇಷ್ಟದೇವತಾ** ಸಿದ್ಧಾಂತಗಳಲ್ಲಿ ಅಡಕವಾಗಿದೆ.

ಋಗ್ವೇದದಲ್ಲಿ, ಉಪನಿಷತ್ತುಗಳಲ್ಲಿ, ಭಗವದ್ಗೀತೆಯಲ್ಲಿ ನಮ್ಮ ಆತ್ಮಕ್ಕೆ ತೃಪ್ತಿಯಾಗುವಂತಹ ರೀತಿಯಲ್ಲಿ ಈಶ್ವರಾರಾಧನೆ ಮಾಡಲು ನಮಗೆ ಸ್ವಾತಂತ್ರ್ಯವಿದೆ ಎಂಬ ಉಪದೇಶವಿದೆ. ಎಲ್ಲ ಐತಿಹಾಸಿಕ ಮತಗಳ ಕಟ್ಟಕಡೆಯ ಗುರಿ ಏನೆಂಬುದನ್ನು ಅವು ಮನಗಂಡಿವೆ. ಎಲ್ಲ ಮಾರ್ಗಗಳೂ ಒಂದೇ ತುದಿಯನ್ನು ಮುಟ್ಟುವುವೆಂದು ಅವುಗಳ ನಂಬಿಕೆ. "ಯೇ ಯಥಾ ಮಾಂ ಪ್ರಪದ್ಯಂತೆ ತಾಂಸ್ತಥೈವ ಭಜಾಮ್ಯಹಂ। ಮಮುವರ್ತ್ಮಾನುವರ್ತಂತೆ ಮನುಷ್ಯಾಃ ಪಾರ್ಥಸರ್ವಶಃ". (ಮನುಷ್ಯರು ಯಾವ ಮಾರ್ಗದಲ್ಲಿ ನಡೆದು ನನ್ನನ್ನು ಸೇರುತ್ತಾರೊ ಅದನ್ನೇ ಸರಿ ಎಂದು ನಾನು ಅಂಗೀಕರಿಸುತ್ತೇನೆ. ಎಲ್ಲೆಲ್ಲೂ ಮನುಷ್ಯರು ನನ್ನಮಾರ್ಗವನ್ನೇ ಅನುಸರಿಸುತ್ತಾರೆ). ವಿವಿಧ ಮಾರ್ಗಗಳಿಂದ ಪರಿಪೂರ್ಣ ಜೀವನದೆಡೆಗೆ ಜಗತ್ತಿನ ಮಾನವರನ್ನೆಲ್ಲ ಈಶ್ವರನು ನಡೆಸುತ್ತಿದ್ದಾನೆ. ಬಿಡುಗಡೆಯ ಸಾಧನ ಎಲ್ಲರ ಉಪಯೋಗಕ್ಕೂ ಸಿದ್ಧವಾಗಿದೆ, ಆದರೆ ಎಲ್ಲರೂ ಅದನ್ನು ಸಮನಾಗಿ ಉಪಯೋಗಿಸಿಕೊಳ್ಳುವುದಿಲ್ಲ. ಈಶ್ವರನಿಗೆ ಯಾರಮೇಲೂ ಪಕ್ಷಪಾತವಿಲ್ಲ. "ಸಮೋಽಹಂ ಸರ್ವಭೂತೇಷು" "ನಮೇದ್ವೇಷ್ಯೋಽಸ್ತಿ ನ ಪ್ರಿಯಃ. ಯೋಽಭಜಂತಿತು ಮಾಂಭಕ್ತ್ಯಾ ಮಯಿತೇ ತೇಷುಚಾಪ್ಯಹಂ" ("ನಾನು ಎಲ್ಲ ಭೂತಗಳಲ್ಲಿಯೂ ಸಮನು" "ನನಗೆ ದ್ವೇಷಿಗಳೂ ಇಲ್ಲ, ಪ್ರಿಯರೂ ಇಲ್ಲ. ಯಾರು ನನ್ನನ್ನು ಭಕ್ತಿಯಿಂದ ಭಜಿಸುತ್ತಾರೆಯೋ ಅವರು ನನ್ನಲ್ಲಿರುವರು; ನಾನು ಅವರಲ್ಲಿರುವೆನು.") ವಿವಿಧ ಮತೀಯ ಸಮೂಹಗಳನ್ನೆಲ್ಲ ಅಳವಡಿಸಿಕೊಳ್ಳುವ ವ್ಯಾಪಕವಾದ ದಿವ್ಯ ಭಾಗವತಭ್ರಾತೃತ್ವವೊಂದಿದೆ. ಈ ವಿಷಯದಲ್ಲಿ ಹಿಂದೂ ದೃಷ್ಟಿ ಸತ್ಯದ ಬಗ್ಗೆ ಔದಾಸೀನ್ಯ ಭಾವವಲ್ಲ, ಆದರೆ ಸತ್ಯದಲ್ಲಿ ಶ್ರದ್ಧೆ ನಿಷ್ಠೆಗಳ ಫಲ.

ಸತ್ಯದ ಒಂದು ವಿಶಿಷ್ಟ ರೂಪವನ್ನು ಅವಲಂಬಿಸಿ ರೂಪರಹಿತವಾದ ಸತ್ಯವನ್ನು ಮುಟ್ಟದವರು ತಾವು ಅವಲಂಬಿಸಿರುವ ಸಾಪೇಕ್ಷ ಸತ್ಯವೇ ನಿರಪೇಕ್ಷ ಸತ್ಯವೆಂದೂ, ಇತಿಹಾಸಿಕ ಸತ್ಯಗಳೇ ಸನಾತನ ಸತ್ಯಗಳೆಂದೂ ಭ್ರಮಿಸುವರು. ವಿವಿಧ ಭಾಷೆಗಳಲ್ಲಿ ದೈವವಾಣಿ ನರನಿಗೆ ಬೋಧಿಸಿದ ತತ್ತ್ವಗಳಂತೆಯೇ ವಿವಿಧ ಧರ್ಮಗಳು.

## ೭. ಈಶ್ವರಸಾಕ್ಷಾತ್ಕಾರ ಮತ್ತು ಅದರ ಮಾರ್ಗ

### ೧. ಪಾರಮಾರ್ಥಿಕ ಪುನರ್ಜನ್ಮ

ಪ್ರಾಚ್ಯ ಧರ್ಮಗಳ ವೈಶಿಷ್ಟ್ಯವೇನೆಂದರೆ ಅವು ಅಧಿಕಾರಕ್ಕಿಂತಲೂ ಅನುಭವಕ್ಕೆ ಕೊಡುವ ಪ್ರಾಶಸ್ತ್ಯ. ಅವುಗಳಿಗೆ ಅವುಗಳದೇ ಆದ ಕರ್ಮಾನುಷ್ಠಾನ, ಪುರಾಣ, ಪುಣ್ಯಕಥೆಗಳಿವೆ. ಅವುಗಳೆಲ್ಲದರ ಇತಿಹಾಸದಲ್ಲಿ ಪ್ರಧಾನವಾದ ಮೂಲಭೂತ ಭಾವನೆ ಆಂತರಿಕ ಪ್ರಜ್ಞೆಯ ಪುನರ್ಭವದ ಭಾವನೆ. ಮತದ ಗುರಿ ನಮ್ಮ ಬುದ್ಧಿಯನ್ನು ಸಂಪ್ರದಾಯಕ್ಕೆ ಶರಣುಮಾಡುವುದಲ್ಲ ; ಸೌಮ್ಯರೀತಿಯ ಆಚಾರ ನಿಷ್ಠೆಯೂ ಅಲ್ಲ. ಮತದ ಉದ್ದೇಶ ಆಧ್ಯಾತ್ಮಿಕ, ಬರೀ ತಾತ್ವಿಕ ಪರಿವರ್ತನೆಯಲ್ಲ. ಅದು ಅವಿದ್ಯೆ ಅಥವಾ ಅಜ್ಞಾನವನ್ನು ವಿದ್ಯೆ ಅಥವಾ ಜ್ಞಾನದಿಂದ ಹೋಗಲಾಡಿಸುವುದು. ಈ ವಿದ್ಯೆ, ಬೋಧಿ, ವಿವೇಕ, ದಿವ್ಯಜ್ಞಾನಗಳು ಶಕ್ತಿಯನ್ನೂ ನಿಶ್ಚಯಾತ್ಮಕ ಜ್ಞಾನವನ್ನೂ ಕೊಡುತ್ತವೆ. ಇದರಿಂದ ನಮ್ಮ ಸ್ವಭಾವದ ಸಂಪೂರ್ಣ ನವೀಕರಣವಾಗಿ ಅದು ಆಂತರಂಗಿಕವಾದ ಮತ್ತೊಂದು ಲೋಕದೊಡನೆ ಐಕ್ಯಗೊಳ್ಳುತ್ತದೆ. ಆಗ ಈ ಲೋಕ ನೆಮ್ಮದಿಯ ಮನೆಯಾದಂತೆ ಭಾಸವಾಗುತ್ತದೆ. ನಾವು ಈ ಲೋಕಕ್ಕೆ ಹೊರತಾದವರು ಅನ್ನುವ ಭಾವನೆ ಆಗ ಉಂಟಾಗುವುದಿಲ್ಲ. ಪ್ರಸನ್ನತೆ ಮತ್ತು ಸಾಮರಸ್ಯ ಮತ್ತೊಮ್ಮೆ ತುಂಬಿಕೊಳ್ಳುತ್ತದೆ. ಎಲ್ಲವೂ ಅಖಂಡ. ಮೋಕ್ಷ, ನಿರ್ವಾಣ, ಭಗವಂತನ ರಾಜ್ಯ ಅನ್ನುವುದೆಲ್ಲವೂ ಆಂತರಂಗದ ಅವಸ್ಥೆಗಳು. ಯಾರು ಈ ರೀತಿಯ ಮತಧರ್ಮದ ಗುರಿಯನ್ನು ಸಾಧಿಸಿದ್ದಾರೆಯೋ ಅಂಥವರ ಮನಸ್ಸು ದೇದೀಪ್ಯಮಾನವಾಗಿರುತ್ತದೆ, ಹೃದಯ ಪರಿವರ್ತನೆಯಾಗಿರುತ್ತದೆ, ಸಂಕಲ್ಪಶಕ್ತಿ ರೂಪಾಂತರಗೊಂಡಿರುತ್ತದೆ. ಈ ಹೊಸಮಾರ್ಗ ಅವರಿಗೆ ಹೊಸಚೈತನ್ಯವನ್ನು ನೀಡುತ್ತದೆ, ಅವರ ಇಡೀ ವ್ಯಕ್ತಿತ್ವವನ್ನೇ ಬದಲಿಸುತ್ತದೆ. ಇದು '**ದ್ವಿತೀಯಮ್ ಜನ್ಮ**' ಎರಡನೆಯ ಹುಟ್ಟು. "ಇಗೋ ಇದೊಂದು ಹೊಸಸೃಷ್ಟಿ ; ಎಲ್ಲವೂ ಹೊಚ್ಚ ಹೊಸತಾಗಿರುವುದನ್ನು ನೋಡು." ಹಿಂದೂ ಮತ್ತು ಬೌದ್ಧ

ಧರ್ಮಗಳಲ್ಲಿ, ಪರಮಾತ್ಮನಿಗೆ ಅರ್ಪಿಸುವ ಕಮಲಪುಷ್ಪ ಕೆಸರಿನಂತಹ ರಾಗದ್ವೇಷಗಳಿಂದ ಸ್ವಚ್ಛ ಸೌಂದರ್ಯ ಆತ್ಮವಸ್ತುವನ್ನು ಆಯ್ದುಕೊಳ್ಳುವ ನಮ್ಮ ಪ್ರಯತ್ನದ ಪ್ರತೀಕ.

ಈ ಜಗತ್ತಿನ ಬೇರುಗಳು ಮೇಲೆ ಇವೆ, ಕೊಂಬೆಗಳು ಕೆಳಗೆ(ಊರ್ಧ್ವ ಮೂಲಂ ಅಧಶ್ಶಾಖಂ) ಎಂದು ಭಗವದ್ಗೀತೆ ಹೇಳುತ್ತದೆ. "ನಾನು ಪರಲೋಕದವ, ನೀವು ಇಹಲೋಕದವರು" ಈ ವಾಕ್ಯಗಳು ನಮ್ಮಲ್ಲಿಯ ಅಪಾರ್ಥಿವ ಅಂಶದಿಂದ ಸತ್ಯದರ್ಶನ ಉಂಟಾಗುವುದೆಂಬ ಭಾವವನ್ನು ಸೂಚಿಸುತ್ತವೆ. ಕಾಲದೇಶಾತೀತವಾದ ಭೂಮಿಕೆಯಿಂದ ಈ ಅಧ್ಯಾತ್ಮ ಶಕ್ತಿ ಇಲ್ಲಿ ಪ್ರವೇಶಿಸುತ್ತದೆ. ಮಾನವ ಲೀಲಾವಿಭೂತಿ ನಿತ್ಯವಿಭೂತಿಗಳ ಸಂಕ್ರಮಣದ ಬಿಂದುವಾಗಿದ್ದಾನೆ. ಭಗವದ್ಗೀತೆ ಸಂತನನ್ನು ಕುರಿತು "ಜಗತ್ತೆಲ್ಲವೂ ಸುಪ್ತವಾಗಿದ್ದಾಗ ಇವನು ಎಚ್ಚರದಿಂದಿರುತ್ತಾನೆ" ಎಂದು ವರ್ಣಿಸಿದೆ. ಪ್ರಾಕೃತ ಪ್ರಪಂಚದ ಮೋಹಕ್ಕೆ ಒಳಗಾಗಿರುವವರೆಗೂ ನಾವು ಸುಪ್ತರೆನಿಸಿಕೊಳ್ಳುತ್ತೇವೆ. ರೂಢಿರೀತಿಯಲ್ಲಿ ನಮ್ಮ ಜೀವನವನ್ನು ಸಾಗಿಸುತ್ತೇವೆ. ಹುಟ್ಟುತ್ತೇವೆ, ಸಂಪಾದಿಸುತ್ತೇವೆ, ಕುಟುಂಬ ಹೂಡುತ್ತೇವೆ, ರಾಜಕೀಯದಲ್ಲಿ ಪ್ರವೇಶಿಸುತ್ತೇವೆ, ವ್ಯಾಪಾರದಲ್ಲಿ ತೊಡಗುತ್ತೇವೆ, ಮುದುಕರಾಗುತ್ತೇವೆ ಮತ್ತು ಮಡಿಯುತ್ತೇವೆ. ಇವೆಲ್ಲವುಗಳಲ್ಲಿ ನಿರತರಾಗಿರುವುದು ತಪ್ಪಲ್ಲ. ಪ್ರಬುದ್ಧ ಚೇತನನಾದವನು ಮಾತ್ರ ಇವೆಲ್ಲದರಲ್ಲಿಯೂ ನಿತ್ಯ ವಿಭೂತಿಯ ದೃಷ್ಟಿಯಿಂದಲೇ ಪಾಲ್ಗೊಳ್ಳುತ್ತಾನೆ.

ನನಗೆ ಅರಿವಾದಂತೆ ಇದು ಕ್ರೈಸ್ತಧರ್ಮದ ಉಪದೇಶವೂ ಆಗಿದೆ. ಈಶ್ವರನ ತಾರಕಜ್ಞಾನ, "ಗಾಸ್ಪೆಲ್" ನಲ್ಲಿ ಚಿತ್ರಿತವಾಗಿರುವ ಐತಿಹಾಸಿಕ ಏಸುವಿನಲ್ಲಿ ನಂಬುವುದಲ್ಲ. ಕ್ರಿಸ್ತನನ್ನು ಐತಿಹಾಸಿಕ ಏಸುವಿನೊಡನೆ ಸಮೀಕರಣಮಾಡಬಾರದು. ಕ್ರಿಸ್ತ ಪರತತ್ತ್ವದ ಆಂತರಂಗಿಕ ಚೇತನ, ಸತ್ಯ, ಸನಾತನ, ಅಕ್ಷರ. ಇತಿಹಾಸದಲ್ಲಿ ಈ ಅಕ್ಷರ ತತ್ತ್ವದಅಭಿವ್ಯಕ್ತಿ ಏಸು ಮಾತ್ರವಲ್ಲ. ಸನಾತನ ಕ್ರಿಸ್ತತತ್ತ್ವದ ಮೂಲಕ ಮೋಕ್ಷಸಂಪಾದನೆ ಆಗಬೇಕೆಂಬುದು ನಿಜ. ಆದರೆ ಈ ಅಕ್ಷರತತ್ವವನ್ನು ಐತಿಹಾಸಿಕ ಏಸುವಿನೊಡನೆ ಮಾತ್ರ ಐಕ್ಯಗೊಳಿಸಲಾಗದು. ಈ ಅಕ್ಷರಜ್ಞಾನ ಏಸುವಿನ ಹೆಸರನ್ನು ಕೇಳದೇ ಇದ್ದರೂ ಸತ್ಯನಿಷ್ಠರಾದವರಿಗೆಲ್ಲ ಲಭ್ಯವಾಗುವಂತಹದು.

## ೨. ಭಕ್ತಿಮಾರ್ಗ

ಪರಮಾತ್ಮನಲ್ಲಿ ನಮ್ಮ ಜೀವನವನ್ನು ಕೇಂದ್ರಿತಗೊಳಿಸುವ ವಿವಿಧ ಮಾರ್ಗಗಳಲ್ಲಿ, ದೀನರಿಗೆ, ಕಲಿಯದವರಿಗೆ, ಉತ್ತಮರಿಗೆ ದಳಿತರಿಗೆ ಬಹು ಸುಲಭವಾದ ಮಾರ್ಗ ಭಕ್ತಿಮಾರ್ಗ. ಇದು ಈಶ್ವರನಲ್ಲಿ ಭಕ್ತಿ ಮತ್ತು ಶರಣಾಗತಿಗಳ ಮಾರ್ಗ. ಅಧ್ಯಾತ್ಮ ಜೀವನದ ಪ್ರಧಾನ ಕೇಂದ್ರ ನಮ್ಮ ಹೃದಯ. ಅಂತರಂಗದ ಪ್ರಾರ್ಥನೆಯಿಂದ ನಮ್ಮ ಹೃದಯವನ್ನು ಭಗವಂತನ ಸಾನ್ನಿಧ್ಯಕ್ಕೆ ಒಯ್ಯುತ್ತೇವೆ. 'ಮುಸ್ಲಿಮ್' ಅನ್ನುವುದರ ಅರ್ಥ ಭಗವದಿಚ್ಛೆಗೆ ತಲೆ ಬಾಗುವುದು ಎಂದು. ಅಂದರೆ ವಿಶ್ವಸಂಕಲ್ಪಕ್ಕೆ ಅನುಗುಣವಾಗಿ ನಡೆದುಕೊಳ್ಳುವುದು, ಸ್ವಾರ್ಥಕ್ಕೆ ಅನುಗುಣವಾಗಿ ಅಲ್ಲ. ಭಕ್ತಿ ಮತ್ತು ಪ್ರಾರ್ಥನೆಯಿಂದ ಸಾಂಸಾರಿಕ ವಿಷಯಗಳಿಂದ ವಿರಕ್ತರಾಗಿ ಪರಮಾತ್ಮನಲ್ಲಿ ಅನುರಕ್ತರಾಗುವ ಮನೋಭಾವವನ್ನು ತಾಳುತ್ತೇವೆ. ಭಕ್ತಿಯಲ್ಲಿ ಶ್ರದ್ಧೆ ಪ್ರೇಮಗಳು ಸಮಾವೇಶಗೊಂಡಿವೆ.

ಭಗವಂತನ ನಾಮಸಂಕೀರ್ತನೆ ಭಕ್ತಿಪಂಥದ ಒಂದು ಅಂಗ. ಹಿಂದುಗಳ **ಜಪ**, ಬೌದ್ಧರ **ಬುದ್ಧಾನುಸ್ಮೃತಿ** ಮತ್ತು ಮುಸ್ಲಿಮರ **ಧಿಕರ್**, ಇವುಗಳೆಲ್ಲ ದಿವ್ಯನಾಮಸ್ಮರಣೆಗೆ ಸಂಬಂಧಪಟ್ಟವು. ಯಹೂದ್ಯರಿಗೆ "ಭಗವಂತನ ನಾಮ ಒಂದು ಬಲವಾದ ಕೋಟೆ; ಭಕ್ತರು ಅದರ ಆಶ್ರಯ ಪಡೆದು ಸುರಕ್ಷಿತರಾಗುತ್ತಾರೆ." ಯೋಯಲ್ ಎಂಬ ಪ್ರವಾದಿ ಹೇಳುತ್ತಾನೆ: "ಯಾರು ದೇವರ ಹೆಸರನ್ನು ಹಿಡಿದು ಕರೆಯುವರೋ ಅವರು ಬಿಡುಗಡೆ ಹೊಂದುತ್ತಾರೆ." "ಏಸುವಿನ ನಾಮ" ಸಂತ ಬರ್ನಾರ್ಡ್ ಹೇಳುವಂತೆ, "ಬೆಳಕು ಮಾತ್ರವಲ್ಲ; ಅದು ಜೀವನದ ಪೋಷಕ ಆಹಾರ. ಈ ರಸದಿಂದ ರುಚಿಗೊಳ್ಳದ ಆಹಾರ ಆತ್ಮವು ಜೀರ್ಣಿಸಿಕೊಳ್ಳದಷ್ಟು ಶುಷ್ಕ; ಈ ಲವಣ ಅದಕ್ಕೆ ರುಚಿ ಕೊಡದಿದ್ದರೆ ಅದು ಅತಿ ಸಪ್ಪೆಯಾಗುವುದು. ನಿನ್ನ ಬರಹಗಳಲ್ಲಿ ಆ ನಾಮವನ್ನು ನಾನು ಕಾಣದಿದ್ದರೆ ಅದು ನನಗೆ ರುಚಿಸದು. ನಿನ್ನ ಪ್ರವಚನದಲ್ಲಿ ಅದು ಪ್ರತಿಧ್ವನಿತವಾಗದಿದ್ದರೆ ಅದು ನನಗೆ ಬೇಸರ. ಅದೇ ನನ್ನ ನಾಲಿಗೆಗೆ ಮಧು, ನನ್ನ ಕಿವಿಗಳಿಗೆ ಇಂಚರ, ನನ್ನ ಹೃದಯಕ್ಕೆ ಆನಂದ, ಹಾಗೂ ನನ್ನ ದಿವ್ಯೌಷಧ. ನಿಮ್ಮಲ್ಲಿ ಯಾರಾದರೂ ದುಃಖದಿಂದ ತಪ್ತರಾ

ಗಿದ್ದೀರೋ? ಹಾಗಾದರೆ ನಿಮ್ಮ ನಾಲಿಗೆಯಿಂದ, ಹೃದಯದಿಂದ ಏಸುವನ್ನು ರುಚಿನೋಡಿ. ಆಗ ನೀವು ಇವನ್ನು ಕಾಣುವಿರಿ, ಅವನ ನಾಮದ ದೀಪ್ತಿಯ ಮುಂದೆ ಮೇಘಗಳು ಚದುರುವುವು, ಆಕಾಶ ಮತ್ತೆ ನಿರ್ಮಲವಾಗುವುದು. ನಿಮ್ಮಲ್ಲಿ ಯಾರಾದರೂ ತಪ್ಪನ್ನು ಎಸಗಿರುವಿರೋ, ನಿರಾಶೆಯ ನೆಳತವನ್ನು ಅನುಭವಿಸುತ್ತಿರುವಿರೋ? ಅಂಥವರು ಈ ಉಜ್ಜೀವನದ ನಾಮವನ್ನು ಉಚ್ಚರಿಸಲಿ, ಆಗ ಅದು ಅವರಲ್ಲಿ ಹೊಸ ಪ್ರಾಣ ತುಂಬುತ್ತದೆ. ಗಾಂಧಿಯ ರಾಮಧೂನ್, ಶ್ರದ್ಧೆ ಮತ್ತು ಭಕ್ತಿಯಿಂದ ದೇವರ ನಾಮವನ್ನು ಉಚ್ಚರಿಸುವವರು ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾಗುತ್ತಾರೆಂದು ನಂಬುತ್ತದೆ.

ಪರಮಾತ್ಮನಲ್ಲಿ ನೆಟ್ಟ ಭಕ್ತಿಯ ಪರಿಣಾಮವಾಗಿ ಆನಂದದ ನೆಲೆಯನ್ನು ಮುಟ್ಟುತ್ತೇವೆ.

ಕ್ರೈಸ್ತಪಂಥ ಪ್ರಧಾನವಾಗಿ ಭಕ್ತಿಪಂಥ. ಇದು ಮಹಾಯಾನ ಬೌದ್ಧಪಂಥವನ್ನೂ ಮತ್ತು ಹಿಂದೂ ಭಕ್ತಿಪಂಥಗಳನ್ನೂ ಹೋಲುತ್ತದೆ.

ಪ್ರಾರ್ಥನೆ, ಉಪವಾಸ, ದಾನ, ಯಾತ್ರೆ ಮತ್ತು ಶೌಚ ಇವುಗಳನ್ನು ಆಚರಿಸಬೇಕೆಂದು ಮೊಹಮ್ಮದ್ ಆಜ್ಞೆ ಇತ್ತಿದ್ದಾನೆ. ಪ್ರಾರ್ಥನೆ ದೇವರ ಕಡೆಗೆ ಅರ್ಧದಾರಿ ಕರೆದೊಯ್ಯುತ್ತದೆ; ಉಪವಾಸ ಅವನ ಅರಮನೆಯ ಬಾಗಿಲಿನವರೆಗೆ ಮುಟ್ಟಿಸುತ್ತದೆ; ದಾನ ಅದನ್ನು ಪ್ರವೇಶಿಸುವಂತೆ ಮಾಡುತ್ತದೆ. ಪ್ರತಿಯೊಬ್ಬ ಮುಸ್ಲಿಮನೂ ತನಗೆ ತಾನೇ ಪುರೋಹಿತ. ಅವನಿಗೆ ಮತ್ತೊಬ್ಬ ಮಧ್ಯಸ್ಥನ ಅವಶ್ಯಕತೆ ಇಲ್ಲ. ಪ್ರಾರ್ಥನೆಯ ವೇಳೆಯಲ್ಲಿ ತನ್ನ ದೃಷ್ಟಿಯನ್ನೂ, ಆಲೋಚನೆಗಳನ್ನೂ ದಿಗಂತದಲ್ಲಿ ನಾಟುವಂತೆ ಮಾಡಬೇಕೆಂದು ಆದೇಶ ಹೊಂದಿದ್ದಾನೆ. ಎಲ್ಲ ಸ್ಥಳಗಳೂ ಪವಿತ್ರವಾದವಾದರೂ ಈ ದಿಗಂತದ ಬಿಂದು ಮೆಕ್ಕಾವಿನ ಪವಿತ್ರ ಮಂದಿರ. ಎಲ್ಲ ದಿನಗಳೂ ಸಮಾನವಾಗಿ ಪವಿತ್ರವೆನಿಸಿದರೂ ಶುಕ್ರವಾರ ಸಾಮೂಹಿಕ ಆರಾಧನೆಗೆ ಮೀಸಲಾಗಿದೆ. ಮುಸ್ಲಿಮರು ಹಿಂದುಮುಂದು ನೋಡದೆ ಪ್ರಾರ್ಥನೆಯ ಸಮಯ ಒದಗಿದಾಗ, ಬೆಟ್ಟದ ಮೇಲಿರಲಿ ಅಥವಾ ಸಂತೆಯ ಮಧ್ಯದಲ್ಲಾಗಲಿ ಪ್ರಾರ್ಥನೆ ಮಾಡುವುದನ್ನು ನೋಡಿದ್ದೇವೆ.

## ೩. ಕರ್ಮಮಾರ್ಗ

ಮಾನವನನ್ನು ಅವನು ಇರುವಂತೆ ತೆಗೆದುಕೊಂಡರೆ, ಪರಸ್ಪರ ಸಮ

ನ್ವಯದ ಅಗತ್ಯವನ್ನು ಸೂಚಿಸುವ ವಿಭಿನ್ನ ಅಂಶಗಳ ಸಮೂಹವಾಗಿದ್ದಾನೆ. ಅವನು ಅತಿ ಸಾತ್ವಿಕನಾಗಬಲ್ಲ ಅಥವಾ ಅತಿ ಕೇಡಿಗನಾಗಬಲ್ಲ; ಅನುರಾಗ ದಿಂದ ಕೂಡಿರಬಲ್ಲ ಅಥವಾ ದ್ವೇಷದಿಂದ ತುಂಬಿರಬಲ್ಲ; ಪರದುಃಖದಲ್ಲಿ ಅನುಕಂಪದಿಂದ ಕೂಡಿರಬಲ್ಲ ಅಥವಾ ಪರರನ್ನು ಪೀಡಿಸುವಷ್ಟು ಕ್ರೂರಿಯಾ ಗಿರಬಲ್ಲ. ಅಂದರೆ, ಅವನಿರುವಂತೆ ನೋಡಿದರೆ, ಅವನು ಅನೇಕ ರೋಗ ರುಜಿನಗಳಿಂದ ಕೂಡಿದವನು. ಅವನಲ್ಲಿನ ಕೆಡಕು ಅವನ ಹೃದಯ ಪಾಷಾಣವಾದುದರ ಪರಿಣಾಮ, ಛಲದಿಂದ ಕೂಡಿದ ಅವಿಧೇಯತೆಯ ಫಲ. ಮಹಾಭಾರತ ಹೇಳುತ್ತದೆ, "ಪುಣ್ಯವಾವುದೆಂಬುದನ್ನು ನಾನು ಬಲ್ಲೆ ಆದರೆ ಅದನ್ನು ಮಾಡಲು ಬಯಸುವುದಿಲ್ಲ; ಪಾಪವಾವುದೆಂದು ಬಲ್ಲೆ, ಆದರೆ ಅದರಿಂದ ಬಿಡುಗಡೆ ಹೊಂದಲು ಬಯಸುವುದಿಲ್ಲ."* ಈ ಮಾನವಾನುಭವ ವನ್ನೇ ಸಂತ ಪಾಲ್ ಹೇಳಿದ್ದಾನೆ. "ನಾನು ಬಯಸುವ ಸುಕೃತವನ್ನು ನಾನು ಮಾಡುವುದಿಲ್ಲ; ಆದರೆ ನಾನು ಬಯಸದ ದುಷ್ಕೃತ್ಯವನ್ನು ಮಾಡು ತ್ತೇನೆ". ಮಾನವನ ಸ್ವಭಾವ ಹೀಗೆ ಎರಡಾಗಿ ಒಡೆದಿದೆ ಎಂಬುದು ಅನು ಭವದಲ್ಲಿ ಸ್ಪಷ್ಟ. ಅವನ ಸ್ವಭಾವ ಸಂಪೂರ್ಣವಾಗಿ ಕೆಟ್ಟದೆ ಎಂದಲ್ಲ. ಹಾಗಿದ್ದರೆ, ಯಾವ ರೀತಿಯ ಉನ್ನತಿಗೂ ಇಲ್ಲಿ ಅವಕಾಶವಿಲ್ಲ, ಆಸೆಯಿಲ್ಲ. ಭಗವದ್ಗೀತೆ ಇಂತಹ ದ್ವಂದ್ವ ಯುದ್ಧದಲ್ಲಿ ಪ್ರಾರಂಭವಾಗುತ್ತದೆ. ಅರ್ಜುನ ವಿಷಾದದ ಸಮಯದಲ್ಲಿ ತನ್ನೊಳಗಿನ ದೇವವಾಣಿಗೆ ಶರಣು ಹೋಗುತ್ತಾನೆ. ಈ ದೇವ ಪಾರ್ಥಸಾರಥಿ. ಇದೇ ರೀತಿಯ ವಾಣಿಯ ವಿಚಾರವನ್ನು ಈಡನ್‌ವನದ ಕಥೆಯಲ್ಲಿ ಕೇಳುತ್ತೇವೆ. ಆಡಮ್ (Adam) ದುಷ್ಪ್ರೇರಣೆಗೆ ಒಳಗಾದಾಗ, ಪಾಪವನ್ನೆಸಗಿದಾಗ, ಪಾಪದಿಂದ ನಾಚಿಕೆ ಹುಟ್ಟಿತು; ಆಗ "ನೀನು ಎಸಗಿದ ಕೃತ್ಯವೇನಿದು" ಎಂಬ ವಾಣಿ ಕೇಳಿಸಿತು.

ಜೀವನವೆಲ್ಲಾ ಮೋಹದೊಡನೆ, ಕೆಡುಕಿನೊಡನೆ ಸಂತತ ಹೋರಾಟ. ಈ ಮೋಹವನ್ನು ನಾವು ಜಯಿಸಿದಷ್ಟೂ ನಮ್ಮ ಸಿದ್ಧಿಯ ಸುಖಾನುಭವ ಹೆಚ್ಚುತ್ತಾ ಹೋಗುತ್ತದೆ. ಮೋಹವನ್ನು ಶಿಸ್ತಿನಿಂದ ಕೂಡಿದ ಉದ್ಯಮ

---

*ಜಾನಾಮಿ ಧರ್ಮಮ್ ನಚಮೇ ಪ್ರವೃತ್ತಿಃ ಜಾನಾಮಿ ಅಧರ್ಮಮ್ ನಚಮೇ ನಿವೃತ್ತಿಃ.

ದಿಂದ ಜಯಿಸಬಹುದು. ದೇಹಕ್ಕೂ ಆತ್ಮಕ್ಕೂ ಇರುವ ಘರ್ಷಣೆ ಹೊಸ ಒಡಂಬಡಿಕೆ (New Testament) ಯಲ್ಲಿ ಎದ್ದು ಕಾಣುವ ಅಂಶವಾಗಿದೆ. ಸಂತ ಪಾಲ್ ಹೀಗೆಂದು ಬರೆಯುತ್ತಾನೆ: "ಪರಮಾರ್ಥದ ಮಾರ್ಗದಲ್ಲಿ ನೀನು ನಡೆ. ಕಾಯದ ಕಾಮನೆಗಳನ್ನು ನೀನು ತಣಿಸಬೇಕಾಗಿಲ್ಲ. ದೇಹ ಆತ್ಮಕ್ಕೆ ವಿರೋಧವಾದ ಕಾಮನೆಗಳುಳ್ಳದ್ದು ಮತ್ತು ಆತ್ಮ ದೇಹಕ್ಕೆ ವಿರೋಧವಾದ ಕಾಮನೆಗಳುಳ್ಳದ್ದು". ದೇಹವೆಂದರೆ ಮಾಂಸ ಮೇದೋಸ್ಥಿ ಸಂಯುತವಾದ ಶರೀರ ಮಾತ್ರವಲ್ಲ. ಮಾನವನ ಇಹಧರ್ಮಸಾಧನೆಗೆ ಶರೀರ ಅತ್ಯಾವಶ್ಯಕವಾದ ಸಾಧನ. ಶರೀರಕ್ಕೆ ಒಂದು ನಿರ್ದಿಷ್ಟ ಉದ್ದೇಶವನ್ನು ಪೂರೈಸುವ ಕೆಲಸವಿದೆ. ಕ್ರೈಸ್ತಸಿದ್ಧಾಂತದಲ್ಲಿ "ದೇವರ ಸಂಕಲ್ಪವೇ ದೇಹ ತಾಳಿತು" (The word became flesh) ಎಂದಾಗ 'ದೇಹ' ಸ್ವರೂಪತಃ ಕೆಡುಕಾದದ್ದು ಅನ್ನುವ ಅರ್ಥ ಬರುವುದಿಲ್ಲ. ದೇಹ ಮತ್ತು ಆತ್ಮಗಳು ಮನುಷ್ಯನ ಸ್ವಭಾವದ ಭೌತ ಮತ್ತು ಅಭೌತ ಪ್ರತ್ಯೇಕ ಅಂಶಗಳೆಂದು ಅರ್ಥ ಮಾಡಬಾರದು. ಶರೀರ ತಟಸ್ಥಕ್ಷೇತ್ರ. ಆಧ್ಯಾತ್ಮಿಕ ಮಾರ್ಗದಲ್ಲಿ ನಡೆದರೆ ಶರೀರದ ಉಪಾಧಿಗಳನ್ನು ನಾವು ಮೀರಲು ಸಾಧ್ಯವಾಗುತ್ತದೆ. ದೇಹ, ಆಧ್ಯಾತ್ಮಿಕ ಜೀವ ತನ್ನ ಆಧ್ಯಾತ್ಮಿಕ ಬೆಳವಣಿಗೆಗಾಗಿ ಉಪಯೋಗಿಸಿಕೊಳ್ಳುವ ಸಿದ್ಧಸಾಮಗ್ರಿ. ಕಾಮಾವಿಷ್ಟನಾದ ವ್ಯಕ್ತಿ ತನ್ನ ದೇಹವನ್ನು ಹೊಲಸು ಮಾಡಿಕೊಳ್ಳುತ್ತಾನೆ. ಮಾನವ ಒಂದು ದ್ವಂದ್ವಾತ್ಮಕ ವ್ಯಕ್ತಿ. ಶರೀರದ ಮೋಹ ಪ್ರಲೋಭನೆಗಳನ್ನು ತಡೆದಷ್ಟೂ ತನ್ನ ಧ್ಯೇಯದ ಸಮೀಪವನ್ನೈದುತ್ತಾನೆ.

ಬ್ರಹ್ಮಚರ್ಯ ಅಥವಾ ವಿಷಯಸುಖಗಳಿಂದ ನಿವೃತ್ತಿ ಬಹುಮುಖ್ಯವೆಂದು ಭಾವಿಸಲ್ಪಟ್ಟಿದೆ. ಪ್ರಬಲವಾದ ಅಭ್ಯಾಸಗಳ ಪ್ರತಿಬಂಧಕಗಳನ್ನು ಮುರಿಯಲು ಸಾಹಸದ ಪ್ರಯತ್ನ ಅವಶ್ಯಕ. ಬಿಟ್ಟ ಅಭ್ಯಾಸಗಳು ನಮ್ಮಲ್ಲಿ ಮತ್ತೊಮ್ಮೆ ತಲೆದೋರದಂತೆ ನಾವು ಎಚ್ಚರದಿಂದ ಇರಬೇಕಾಗುತ್ತದೆ.

"ಮನುಷ್ಯನ ಬದುಕು ವಸ್ತುಗಳ ಸಂಚಯದಿಂದ ಪೂರ್ತಿಯಾಗುವುದಿಲ್ಲ." ಇಹದ ಭೋಗಜೀವನಕ್ಕಾಗಿ ಬಾಹ್ಯವಾದ ಭೋಗೋಪಕರಣಗಳ ಮೇಲೆ ನಾವು ವಾಲಿದಷ್ಟೂ ನಮ್ಮ ಅಂತಸ್ಸತ್ವದ ಅರಿವಿನಿಂದ ದೂರವಾಗುತ್ತಾ ಹೋಗುತ್ತೇವೆ. ನಾವು ಅನಾಸಕ್ತ ಭಾವವನ್ನು ಬೆಳೆಸಿ

ಕೊಳ್ಳಬೇಕೆಂದು ನಮಗೊಂದು ಕರೆ ಇದೆ. ವಿರಕ್ತಿಭಾವದಿಂದ ನಮ್ಮ ಸತ್ವಶುದ್ಧಿ ಆಗುತ್ತದೆ. "ಕರ್ಮದಿಂದ, ಪ್ರಜೆಯಿಂದ, ಧನದಿಂದ ಪರಮಾರ್ಥವನ್ನು ಮುಟ್ಟಲು ಸಾಧ್ಯವಿಲ್ಲ; ವಿರಕ್ತಿಯಿಂದಲೇ ಇದು ಸಾಧ್ಯ."* ಕೂಟದಂತಸುತ್ತದಲ್ಲಿ ಬುದ್ಧ ಹೀಗೆ ಹೇಳುತ್ತಾನೆ. "ಪಶುಯಜ್ಞಕ್ಕಿಂತಲೂ ಆತ್ಮಯಜ್ಞಶ್ರೇಷ್ಠ. ತನ್ನ ದುಷ್ಟ ಕಾಮನೆಗಳನ್ನು ದೇವರಲ್ಲಿ ಅರ್ಪಿಸುವಾತ ಬಲಿಪೀಠದ ಮೇಲೆ ಪಶುವಧೆ ಮಾಡುವುದರ ನಿಷ್ಫಲತೆಯನ್ನು ಅರಿಯುತ್ತಾನೆ. ವಧೆಗೆ ಶುದ್ಧಿಮಾಡುವ ಶಕ್ತಿಯಿಲ್ಲ. ಆದರೆ ಕಾಮನೆಗಳ ನಾಶದಿಂದ ಹೃದಯ ಶುದ್ಧಿಯಾಗುತ್ತದೆ. ಧರ್ಮದ ಕಟ್ಟಳೆಗಳಂತೆ ನಡೆಯುವುದು ದೇವತೆಗಳನ್ನು ಪೂಜಿಸುವುದಕ್ಕಿಂತಲೂ ಶ್ರೇಷ್ಠ." ಸಂತ ಪಾಲ್ 'ರೋಮನ್ಸ್' ಅನ್ನುವುದರಲ್ಲಿ ಹೀಗೆ ಹೇಳುತ್ತಾನೆ; "ದೇಹದ ವಾಂಛೆಗಳಂತೆ ನಡೆದುಕೊಳ್ಳುವೆಯಾದರೆ ಮೃತ್ಯು ಸಿದ್ಧ; ಆತ್ಮದ ಇಚ್ಛೆಯಂತೆ ನಡೆದುಕೊಂಡರೆ ದೇಹದ ಕರ್ಮ ಕ್ಷಯವಾಗುವುದು, ಮತ್ತು ನಿನ್ನ ಉಜ್ಜೀವನ ಸಿದ್ಧ" "ಆಗ ನಾವು ಕ್ರಿಸ್ತನಂತೆ ಈಶ್ವರನ ಮಕ್ಕಳಾಗುತ್ತೇವೆ. ಆದರೆ ಅವನೊಡನೆ ಭವ್ಯತೆಯನ್ನು ಪಡೆಯಬೇಕಾದರೆ ಅವನು ಅನುಭವಿಸಿದ ಯಾತನೆಯನ್ನು ನಾವೂ ಅವನೊಡನೆ ಅನುಭವಿಸಬೇಕು." ಆದುದರಿಂದ ಕ್ರಿಸ್ತ ಧರ್ಮಗುರು ಈ ಮಾತಿಗೆ ಮಾತು ಜೋಡಿಸಿ ಹೇಳುತ್ತಾನೆ. "ಸಹೋದರರೇ, ಈಶ್ವರನ ಅನುಗ್ರಹವನ್ನು ನೆಚ್ಚಿ, ನಾನು ನಿಮಗೆ ಮಾಡುವ ಬಿನ್ನಹವೇನೆಂದರೆ, ನಿಮ್ಮ ದೇಹಗಳನ್ನು ಆತ ಒಪ್ಪುವಂತೆ ಅವನಿಗೆ ಒಪ್ಪಿಸಿ ಪುನೀತರಾಗಿರಿ, ಇದೇ ನಿಮ್ಮ ಪಾರಮಾರ್ಥಿಕ ಪೂಜೆ."

ಆತ್ಮಸಂಯಮಕ್ಕೆ ಹೆಚ್ಚು ಅವಕಾಶ ಬಯಸಿ ಆಗಾಗ್ಗೆ ಮನುಷ್ಯರು ಸಂಸಾರದಿಂದ ನಿವೃತ್ತರಾಗುತ್ತಾರೆ. ಬಹಳ ಹಿಂದಿನ ಕಾಲದಿಂದಲೂ ಹಿಂದೂ ಧರ್ಮದಲ್ಲಿ ಮತ್ತು ಬೌದ್ಧ ಧರ್ಮದಲ್ಲಿ ಸನ್ಯಾಸಾಶ್ರಮ ಪ್ರಚಲಿತವಾಗಿದೆ. ಕ್ರೈಸ್ತಧರ್ಮದ ಸನ್ಯಾಸಾಶ್ರಮಗಳು ಮರುಭೂಮಿಯ ಗುರುಗಳೆಂದು ಕರೆಯಲ್ಪಡುವ ಏಸು ಮತ್ತು ಅವನ ಶಿಷ್ಯರಿಂದ ಸ್ಥಾಪಿತವಾದವು. ಸಿಸ್ಟರ್ಸಿ

---

*ನಕರ್ಮಣಾ ನಪ್ರಜಯಾ ಧನೇನ ತ್ಯಾಗೇನೈಕೇಅಮೃತತ್ವ ಮಾನಶುಃ.

ಯನ್ ಸಂನ್ಯಾಸ ಸಂಸ್ಥೆಗೆ (Cistercian order) ಹೆಸರು ಬಂದದ್ದು, ಸಿಟೋ ಅನ್ನುವ ಸ್ಥಳದಲ್ಲಿ ಮೊಟ್ಟಮೊದಲು ಈ ಮಠ ಸ್ಥಾಪಿತವಾದ್ದರಿಂದ; ಇದು ಸಾವಿರದ ತೊಂಬತ್ತೆಂಟರಲ್ಲಿ (೧೦೯೮) ಬರ್ಗಂಡಿಯಲ್ಲಿ ಸ್ಥಾಪಿತವಾಯಿತು. ಈ ಸಂಸ್ಥೆ ಇತರ ಮಠಗಳನ್ನು ನಿರ್ಜನ ಪ್ರದೇಶಗಳಲ್ಲಿ ಸ್ಥಾಪಿಸಿತು. ಅದರ ಆಶ್ರಮವಾಸಿಗಳು ಸರಳವಾದ ಮತ್ತು ಶರೀರಶ್ರಮದ ಜೀವನವನ್ನು ಅವಲಂಬಿಸಿದರು. ಇವರಲ್ಲಿ ಹೆಚ್ಚು ವಿಖ್ಯಾತಿ ಪಡೆದವನು 'ಕ್ಲೇರ್‌ವೊ' ಮಠದ ಸ್ಥಾಪಕ ಸಂತಬರ್ನಾರ್ಡ್. ಸಂತಬೆನಿಡಿಕ್ಟನ ಪ್ರಕಾರ ಸಂನ್ಯಾಸದ ಬದುಕು "ಪರಮಾರ್ಥ ಜೀವನದ ಪ್ರಾರಂಭ". ಇದರ ಪರಾಕಾಷ್ಠೆಯ ಕಡೆಗೆ ಕ್ಷಿಪ್ರವಾಗಿ ಸಾಗಬಯಸುವವನಿಗೆ ಗುರುಪಿತಾಮಹರ (Holy Fathers) ಉಪದೇಶಗಳಿವೆ. ಅದರಂತೆ ನಡೆದರೆ ಅದು ಮಾನವನ ಮತಜೀವನದ ಆತ್ಯಂತಿಕ ಗುರಿಯನ್ನು ಮುಟ್ಟಿಸುತ್ತದೆ."ಆಶ್ರಮವಾಸವೇ ಆಧ್ಯಾತ್ಮಿಕ ಪರಿಪೂರ್ಣತೆಯ ಉತ್ತುಂಗ ಶಿಖರವಲ್ಲ. ಮಹಮ್ಮದ್ ದೇಹವನ್ನು ದಂಡಿಸಲು, ಆತ್ಮವನ್ನು ಶುದ್ಧ ಮಾಡಲು ಮೂವತ್ತು ದಿನಗಳ ಉಪವಾಸ ಮಾಡಬೇಕೆಂದು ವಿಧಿಸುತ್ತಾನೆ.

ಧ್ಯಾನಾನುಷ್ಠಾನವೆಂದರೆ ಲೋಕವನ್ನು ಸಂಪೂರ್ಣವಾಗಿ ತ್ಯಜಿಸುವುದು ಎಂದರ್ಥವಲ್ಲ; ಲೌಕಿಕ ಸಲಕರಣೆಗಳನ್ನು ಪರಮಾರ್ಥ ಸಾಧನೆಗಾಗಿ ಉಪಯೋಗಿಸಿಕೊಳ್ಳುವುದು. ಶರೀರದ ಅಗತ್ಯಗಳನ್ನು ನಿರಾಕರಿಸುವುದಲ್ಲ; ಆದರೆ ಅಧ್ಯಾತ್ಮ ಪರಿಪೂರ್ಣತೆಗೆ ಆತ್ಮವು ಶರೀರವನ್ನು ಅಳವಡಿಸಿಕೊಳ್ಳುತ್ತದೆ. ಇದು ಸಾಧ್ಯವಾಗಬೇಕಾದರೆ ಬಾಹ್ಯ ಕಶ್ಮಲಗಳಿಂದ ಆತ್ಮವು ನಿರ್ಮಲವಾಗಬೇಕು. ಅದಕ್ಕೆ ಅಂಟಿದ ಕ್ಷುದ್ರ ಸ್ವಭಾವದಿಂದ ನಿವೃತ್ತವಾಗಬೇಕು.

ಸಮಾಜದಲ್ಲಿನ ಸ್ಥಾನಮಾನಗಳು ಏನೇ ಇರಲಿ, ಪ್ರತಿವ್ಯಕ್ತಿಯೂ ಈಶ್ವರನ ದೃಷ್ಟಿಯಲ್ಲಿ ಅತ್ಯಂತ ಅಮೂಲ್ಯವಸ್ತು. ಧ್ಯಾನದಿಂದ ಜೀವನದ ವಿಷಯದಲ್ಲಿ ಗಂಭೀರವಾದ ಮತ್ತು ಪವಿತ್ರವಾದ ಭಾವವನ್ನು ತಾಳುತ್ತೇವೆ. ಸಮಾಜದ ಸ್ಥಿತಿಗತಿಗಳನ್ನು ಸುಧಾರಿಸಬೇಕಾದರೆ ನ್ಯಾಯಕ್ಕಾಗಿ ಮತ್ತು ಎಲ್ಲರ ಸಮತೆಗಾಗಿ ಹೋರಾಟ ನಡೆಸುವುದು ಅಗತ್ಯ. ಅದರ ಸಿದ್ಧಿಗಾಗಿ ನಮ್ಮ ಸ್ವಂತ ಹೊಣೆಗಾರಿಕೆಯನ್ನೂ ಒಪ್ಪಿಕೊಳ್ಳುವಂತಾಗಬೇಕು.

ಪ್ರವಾದಿಯು ದಿವ್ಯವಾಣಿಯನ್ನು ಪುನಶ್ಚರಣೆ ಮಾಡುವುದನ್ನು ಕೇಳಿ: "ನಾನು ನ್ಯಾಯವನ್ನು ಕಟ್ಟಳೆಮಾಡುತ್ತೇನೆ ಮತ್ತು ಧರ್ಮವನ್ನು ಪ್ರಮಾಣವನ್ನಾಗಿ ಮಾಡುತ್ತೇನೆ." ಆ ಸಂದೇಶದ ಮತ್ತೊಂದು ಭಾಗ ಇದು: "ಪಾಪವೆಸಗುವುದನ್ನು ನಿಲ್ಲಿಸಿ, ಒಳ್ಳೆಯದನ್ನು ಮಾಡಲು ಕಲಿಯಿರಿ. ನ್ಯಾಯವಾಗಿ ನಡೆದುಕೊಳ್ಳಿ. ಪರಪೀಡೆ ಮಾಡುವವರನ್ನು ತಡೆ ಹಿಡಿಯಿರಿ. ಅನಾಥರಿಗೆ ರಕ್ಷಣೆ ನೀಡಿರಿ; ವಿತಂತುವಿನ ಪರ ವಾದಿಸಿ."

ಎಲ್ಲಜೀವಿಗಳಲ್ಲಿಯೂ ಮೈತ್ರಿ, ಕರುಣೆ ಬೆಳೆಸಿಕೊಳ್ಳಿ ಎನ್ನುತ್ತಾನೆ ಬುದ್ಧ. "ನಮ್ಮ ಮನಸ್ಸು ಕದಲದಿರಲಿ, ನಮ್ಮ ಮಾತು ಹೊಲಸಾಗದಿರಲಿ; ಮಾರ್ದವದಿಂದ ಮತ್ತು ಕರುಣೆಯಿಂದ ಇರೋಣ, ಹೃದಯದಲ್ಲಿ ಪ್ರೇಮ ತುಂಬಲಿ, ಕಪಟರಹಿತರಾಗೋಣ; ನಮ್ಮ ಪ್ರೇಮಮಯ ವಿಚಾರಕಿರಣಗಳಿಂದ ಅಂಥವನನ್ನು ಬೆಳಗೋಣ. ಅವನಿಂದ ಹೊಮ್ಮುವ ಪ್ರೇಮಮಯತೆ ಲೋಕವನ್ನೆಲ್ಲಾ ವ್ಯಾಪಿಸಲಿ; ಅದು ಹಿರಿದಾಗಿ ಬೆಳೆದು ಅಸದಳವಾದ ರೀತಿಯಲ್ಲಿ ವ್ಯಾಪಿಸಲಿ. ಅದು ದ್ವೇಷಶೂನ್ಯವಾಗಲಿ, ನಿಷ್ಠುರರಹಿತವಾಗಲಿ." "ತಾಯಿ ಹೇಗೆ ತನ್ನ ಏಕಮೇವ ಶಿಶುವನ್ನು ರಕ್ಷಿಸಲು ತನ್ನ ಪ್ರಾಣವನ್ನಾದರೂ ತೆರಲು ಸಿದ್ಧಳಾಗಿರುವಳೋ ಹಾಗೆ ನಾವು ಎಲ್ಲ ಪ್ರಾಣಿಗಳಲ್ಲಿಯೂ ಮಮತೆಯಿಂದಿರಲು ಪ್ರಯತ್ನಿಸಬೇಕು." ಅನೇಕ ಬುದ್ಧರ ಪೈಕಿ ಅಮಿತಾಭ (ಜಪಾನಿನಲ್ಲಿ ಅಮಿದ) ಬಹು ಜನಪ್ರಿಯ. ಆತ, ಬಹುಕಾಲದ ಹಿಂದೆ, ಭಿಕ್ಷುವಾಗಿ ತನ್ನ ಸಹಚರ ಪ್ರಾಣಿಗಳಲ್ಲೆಲ್ಲಾ ಪ್ರೇಮನಿಷ್ಠೆಯನ್ನು ತಾಳಲು ನಲವತ್ತಾರು ವ್ರತಗಳನ್ನು ಕೈಗೊಂಡನು. ತನ್ನ ಪ್ರಜ್ಞೆಯನ್ನೆಲ್ಲಾ ತಾನು ಗಳಿಸಿದ ಪುಣ್ಯವನ್ನೆಲ್ಲಾ ಇತರರ ಹಿತರಕ್ಷಣೆಗಳಿಗಾಗಿ ಧಾರೆಯೆರೆಯಲು ಸಂಕಲ್ಪಿಸಿದನು. ಅಮಿತಾಭ ಪರಮಪ್ರಜ್ಞೆಯ ಮತ್ತು ಕಾರುಣ್ಯದ ಪರಿಪೂರ್ಣ ಮೂರ್ತ ಸ್ವರೂಪ. ಭಕ್ತಿಯಿಂದ ಯಾರು ಅವನನ್ನು ಧ್ಯಾನ ಮಾಡುತ್ತಾರೋ ಅವರು ಪರಮಾನಂದದ ಪರಮಪದವನ್ನು ಪ್ರವೇಶಿಸುತ್ತಾರೆ. ಆ ಲೋಕರಕ್ಷಕನ ಅಪಾರ ಪುಣ್ಯಭಂಡಾರದಲ್ಲಿ ಪಾಲ್ಗೊಳ್ಳುತ್ತಾರೆ. **ಪರಿವರ್ತ** ಸಿದ್ಧಾಂತ ಅಂದರೆ ನಾವುಗಳಿಸಿದ ಪುಣ್ಯವನ್ನು ಇತರರಿಗೆ ಹಂಚಿಕೊಡುವುದು. ಇದು ಎಲ್ಲ ಜೀವಿಗಳ ಅನ್ಯೋನ್ಯಾಶ್ರಯವನ್ನು ಸೂಚಿಸುತ್ತದೆ.

ಮಾನವನಿರ್ಮಿತ ಲೋಕ ದೇವಲೋಕದ ಪ್ರತಿರೂಪ. ಮಾನವ ಲೋಕ ವಿಶ್ವಮಾನವ ಸಮಾಜವಾಗಬೇಕಾದರೆ, ಸರ್ವೋದಯಕಾರಕವಾದ ಸರ್ವಹಿತದ ದರ್ಶನದಲ್ಲಿ ನಂಬಿಕೆ ತಾಳಬೇಕಾಗುತ್ತದೆ; ಅಧ್ಯಾತ್ಮಸಂಬಂಧ ವಾದ ವಿಷಯಗಳಲ್ಲಿ ಸಮರಸವನ್ನು ಕಾಣಬೇಕಾಗುತ್ತದೆ.

## ೪. ಜ್ಞಾನಮಾರ್ಗ

ತಾರ್ಕಿಕ ಜ್ಞಾನ ನಮ್ಮನ್ನು ಪರಾತ್ಪರ ವಸ್ತುವಿನ ಬಾಗಿಲಿಗೆ ಒಯ್ಯ ಬಲ್ಲದು ಆದರೆ ಅದನ್ನು ಪ್ರವೇಶ ಮಾಡಲು ತಾರ್ಕಿಕ ಮತಿಯೊಂದೇ ಸಾಲದು. ನಮ್ಮ ಇಡೀ ಮಾನವಸ್ವಭಾವವನ್ನು ದೋಷರಹಿತವನ್ನಾಗಿ ಮಾಡುವುದರಿಂದ ಮಾತ್ರ ಇದು ಸಾಧ್ಯ. ನಮ್ಮ ಸ್ವಭಾವದ ದೋಷ ಗಳಿಂದ ಪಾರಾಗಲು ದೇಹ, ಮನಸ್ಸು, ಆತ್ಮ ಇವುಗಳ ಸದ್ಗುಣಗಳನ್ನು ಅಭ್ಯಾಸಮಾಡಬೇಕು. ದೇಹವೇ ಎಲ್ಲ ಕೇಡಿಗೂ ಮೂಲವೆಂದು ಭಾವಿ ಸುವುದು ತಪ್ಪು. ಇದು ಈಶ್ವರ ಮತ್ತು ಸೈತಾನ ಅನ್ನುವ ಎರಡು ಸಮಾನ ತತ್ವಗಳನ್ನೂ ಒಪ್ಪಿಕೊಳ್ಳುವ ಮೇನಿಕೀಇಸಮ್ (Manichaeism) ವಾದದಂತೆ ಆಗುವುದು. ಮಾನವನನ್ನು ದೇಹದ ಕಾರಾಗೃಹದಲ್ಲಿ ತಾತ್ಕಾ ಲಿಕವಾಗಿ ಸೆರೆಹಿಡಿಯಲ್ಪಟ್ಟ ಈ ಪ್ರಪಂಚಕ್ಕೆ ಹೊರತಾದ ಶುದ್ಧ ಆತ್ಮ ನೆಂದು ಭಾವಿಸಬಾರದು. ಅವನು ಚಿದಚಿದ್ವಿಶಿಷ್ಟವಾದ ಈ ಗತಿಶೀಲ ಜಗತ್ತಿನಲ್ಲಿ ಒಂದು ಭಾಗ. ಹೇಗೆ ಆತ್ಮವು ದೇಹದ ಗುರಿಯೋ ಹಾಗೆ ಬ್ರಹ್ಮಲೋಕ ಈ ಮರ್ತ್ಯಲೋಕದ ಗುರಿಯಾಗಿದೆ. ಮಾನವನ ಪರಿ ಪೂರ್ಣತೆಗೆ ಪ್ರತಿಬಂಧಕವಾದದ್ದು ಶರೀರವಲ್ಲ, ಕೆಟ್ಟದುದನ್ನು ಪ್ರೇರೇ ಪಿಸುವ ನಮ್ಮ ಚಿತ್ತವೃತ್ತಿ. ದೇಹ ದೇವಾಲಯ, "ಪವಿತ್ರಾತ್ಮನ ತಾತ್ಕಾ ಲಿಕ ವಸತಿ".

ಭಾವೋದ್ರೇಕಗಳನ್ನು ಸಂಯಮಗೊಳಿಸುವುದೆಂದರೆ ಅವುಗಳನ್ನು ಮೂಲೋತ್ಪಾಟನೆ ಮಾಡುವುದಲ್ಲ, ಅವುಗಳನ್ನು ಆತ್ಮಶಕ್ತಿಯನ್ನಾಗಿ ಪರಿ ವರ್ತನೆಗೊಳಿಸುವುದು. ಇಲ್ಲಿಯೇ ಈಗಲೇ ದೇಹ ಆತ್ಮನ ಜೀವನದಲ್ಲಿ ಪಾಲುಗೊಳ್ಳಲು ಸಾಧ್ಯ, ಪವಿತ್ರಗೊಳಿಸಿದ ಶರೀರ ದಿವ್ಯಜೀವನನ್ನು ಅಭಿ ವ್ಯಕ್ತಗೊಳಿಸಬಲ್ಲದು.

ಈಶ್ವರಾಂಶ ಬೀಜರೂಪವಾಗಿ ನಮ್ಮೆಲ್ಲರಲ್ಲಿಯೂ ಇದೆ. ಅದು ಬೆಳೆ

ಯಲು ಅವಕಾಶಕೊಡಬೇಕು. ನಾವು ಅರಿತಿರುವುದಕ್ಕಿಂತಲೂ ಆಳವಾದ ವ್ಯಾಪಕವಾದ ಆಂತರಿಕ ಚೈತನ್ಯದ ಸೂಚನೆಗಳು ನಮ್ಮಲ್ಲಿ ಆಗಾಗ ಹೊಳೆಯುತ್ತವೆ. "ಬೆಳಕು ಕತ್ತಲಲ್ಲಿ ಬೆಳಗುತ್ತದೆ, ಆದರೆ ಕತ್ತಲಿಗೆ ಇದರ ಅರಿವಿಲ್ಲ," ಒಳಗಿನ ತಿರುಳು ನಮಗೆ ಸಿಕ್ಕಬೇಕಾದರೆ ಹೊರಗಿನ ಚಿಪ್ಪನ್ನು ಒಡಯಬೇಕು. ಬೆಳಕನ್ನು ನೋಡಬೇಕಾದರೆ ಕತ್ತಲೆಯನ್ನು ಕಳೆಯಬೇಕು. ನಮ್ಮ ಪ್ರಶಾಂತ ಚಿತ್ತದ ಆಳವನ್ನು ಹೊಗಬೇಕು. ಈ ಪ್ರಶಾಂತತೆ ತಾಮಸಮಯವಾದ ಭ್ರಾಮಕ ಶಾಮನವಲ್ಲ. ಭಾವಶೂನ್ಯ ನಕಾರಾತ್ಮಕ ಸ್ಥಿತಿಯಲ್ಲ. ಇದು ಶಕ್ತಿಸಂಪನ್ನವಾದ ಅನಂತತೆಯ ಶಾಂತಿ. ಧ್ಯಾನವೆನ್ನುವುದು ಮಾನಸಿಕ ವ್ಯಾಪಾರಗಳ ಶೂನ್ಯತೆಯಲ್ಲ, ವಿಚಾರದ ಅಭಾವವಲ್ಲ. ಇದು ಜಗತ್ತಿನ ವ್ಯವಹಾರಗಳಿಂದ ಮನಸ್ಸನ್ನು ಬಿಡಿಸಿಕೊಂಡು ನಿರ್ಲಿಪ್ತತೆಯ ಅಂತರಾಳದಲ್ಲಿ ಅದನ್ನು ಮುಳುಗಿಸುವುದು. ಕೊನೆಗೆ ಜೀವನದ ಸ್ಥಿತಿಗತಿಗಳ ಒತ್ತಡದಿಂದ ಬಿಡುಗಡೆಗೊಳಿಸಿ ಅದನ್ನು ಶಾಂತಿಮಯವಾದ ಸ್ವತಂತ್ರಸ್ಥಿತಿಗೆ ಒಯ್ಯುವುದು. ಈ ಸಮಸ್ಥಿತಿಯನ್ನು ಸತ್ತ್ವಪೂರ್ಣವಾದ ಅಭ್ಯಾಸದಿಂದ ಮಾತ್ರ ಸಂಪಾದಿಸಬಲ್ಲೆವು.

ಯೋಗದ ಗುರಿ ನಮ್ಮ ವ್ಯಕ್ತಿತ್ವವನ್ನುಸಮಗ್ರಪೂರ್ಣವನ್ನಾಗಿ ಮಾಡುವುದು. ಇದು ಒಂದು ರೀತಿಯ ಕ್ರೋಡೀಕರಣ, ಅವಿಚ್ಛಿನ್ನ ಸ್ಮೃತಿ ರೂಪವಾದದ್ದು, ಆತ್ಮನಿಂದ ಆತ್ಮನನ್ನು ಸೇರುವುದು. ಆತ್ಮನ ಅಂತಶ್ಶಕ್ತಿಗಳ ಸಾಕ್ಷಾತ್ಕಾರ. ಎಲ್ಲ ಮತ ಧರ್ಮಗಳಲ್ಲಿಯೂ ಹಂತ ಹಂತದಲ್ಲಿ ಕಂಡುಬರುವ ಜೀವನವಿಧಾನ ಮತ್ತು ಶಿಸ್ತುಗಳನ್ನು ಸೂಚಿಸುತ್ತದೆ ಯೋಗ ಎಂಬ ಶಬ್ದ. **ಚಿತ್ತವೃತ್ತಿನಿರೋಧವೇ** ಯೋಗ. ಈ ಚಿತ್ತವೃತ್ತಿಗಳ ನಿರೋಧ ನಮ್ಮನ್ನು ನಮ್ಮ ಮನಸ್ಸಿನ ವ್ಯಾಪಾರಗಳ ಮೂಲಕ ಅಂತಿಮಗುರಿಗೆ ಒಯ್ಯುತ್ತದೆ. ಮಾನವನಲ್ಲಿ ಅವನ ಸಾಮಾನ್ಯ ಮನಸ್ಸಿನ ಹಿಂದೆ ಅದಕ್ಕಿಂತಲೂ ಶ್ರೇಷ್ಠವಾದ ಮನಸ್ಸೊಂದಿದೆ. ಮನಸ್ಸಿನ ಸಾಮಾನ್ಯ ಜಾಗ್ರತಸ್ಥಿತಿಯಲ್ಲಿ ನಮ್ಮ ಆಲೋಚನೆಗಳನ್ನು ಹೊರಗೆಡಹುತ್ತೇವೆ; ನಮ್ಮ ಧ್ಯಾನದ ಮನಸ್ಸು ಅದಕ್ಕಿಂತಲೂ ಆಳವಾದದ್ದು. ನಮ್ಮಲ್ಲಿನ ಸ್ಫೂರ್ತಿಯನ್ನು ಆದು ಮೇಲಿನ ಯಾವದೋ ಲೋಕದಿಂದ ಬರುತ್ತದೆಂದು ಭ್ರಮಿಸುತ್ತೇವೆ; ಆದರೆ ಅದು ನಮ್ಮೊಳಗಿನ

ಆತ್ಮದಿಂದಲೇ ಉದ್ಭವಿಸುತ್ತದೆ. ಬುದ್ಧಿಗೂ ಮೀರಿದ ಅಂತರಾಳದಿಂದ ಹೊರ ಹೊಮ್ಮುತ್ತ ದೆ.ಈ ಆಳಕ್ಕೆ ಹೋಗಬೇಕಾದರೆ ಮೌನಯುತ ಧ್ಯಾನವನ್ನು ಅಭ್ಯಸಿಸಬೇಕು. ಏಕಾಂತದಲ್ಲಿ ನಮ್ಮಲ್ಲಿ ಆತ್ಮಶ್ರದ್ಧೆ ತುಂಬುವ ಆತ್ಮಶಕ್ತಿಯನ್ನು ಸಾಕ್ಷಾತ್ಕಾರಮಾಡಿಕೊಳ್ಳುತ್ತೇವೆ. ಸಾಮಾನ್ಯ ಜೀವನದ ಅಭಾವಗಳು ಇದಕ್ಕೆ ಪ್ರತಿಬಂಧಕವಾಗುವುದಿಲ್ಲ. ಬಹುದೀರ್ಘಕಾಲ ಧ್ಯಾನಾಸಕ್ತರಾಗಿರುವುದು ಕಷ್ಟಸಾಧ್ಯ.

ಯೋಗಸೂತ್ರವು ಈಶ್ವರ ಪ್ರಣಿಧಾನದ ಮನೋಭಾವವನ್ನು ಬೆಳೆಸಿಕೊಳ್ಳಲು ಸಹಾಯಮಾಡುತ್ತದೆ. ಅದು ನಮ್ಮನ್ನು ನಿಶ್ಚಲವಾಗಿರಬೇಕೆಂದೂ, ಮನಸ್ಸಿನ ಹೋರಾಟವನ್ನು ನಿಲ್ಲಿಸಬೇಕೆಂದೂ, ನಮ್ಮೊಳಗಿನ ಬೆಳಕು ಪ್ರಕಾಶಿಸಲು ಸಹನೆಯಿಂದ ಕಾದಿರಬೇಕೆಂದೂ ಬೋಧಿಸುತ್ತದೆ. ದೇಹವು ಆತ್ಮದ ವಾಹನವಾಗಿರುವಂತೆ ನಮ್ಮ ಆತ್ಮವು ಪರಮಾತ್ಮನ ವಾಹನವಾಗಬಲ್ಲದೆಂದು ಭಾವಿಸುತ್ತದೆ.

ಅಂತರ್ಜ್ಯೋತಿಯ ಮೇಲೆ ನಮ್ಮ ಮನಸ್ಸು ಸ್ಥಿರವಾದರೆ ಏಕಾಗ್ರತೆ ಪ್ರಾಪ್ತವಾಗುತ್ತದೆ. ಈ ಏಕಾಗ್ರತೆಯ ಸ್ಥಿತಿ ಎಲ್ಲ ಕ್ಲೇಶಗಳನ್ನೂ ಮೀರಿದುದು. ಈ ಸ್ಥಿತಿ ರಾಗದ್ವೇಷರಹಿತರಾದ ಪ್ರಬುದ್ಧ ಆತ್ಮದ ಉಪಾಸನೆಯಿಂದ ಪ್ರಾಪ್ತವಾಗಬಹುದು. ನಮಗೆ ಇಷ್ಟವಾದ ದೇವತೆಯ ಮೂರ್ತಿಯ ಅಥವಾ ಪ್ರತೀಕದ ಮೇಲೆ ನಮ್ಮ ಧ್ಯಾನವನ್ನು ಕೇಂದ್ರೀಕರಿಸುವುದರಿಂದಲೂ ದೊರೆಯುಬಲ್ಲದು. ಧ್ಯಾನ ಅಂದರೆ ಮೂರ್ಛೆಯಲ್ಲ. ಅಥವಾ ಸಮಾಧಿಯಲ್ಲ. ಅದು ಗಾಢವಾದ ಅವಧಾನ ಕ್ರಿಯೆ. ಪ್ಲೋಟೈನಸ್ ಈ ಅಂತರಂಗ ಮಾರ್ಗವನ್ನು ಅನುಸರಿಸಿ ಎಂದು ಬೋಧಿಸುತ್ತಾನೆ. ಪರಮಾತ್ಮನಲ್ಲದುದರಲ್ಲಿ ಅನಾಸಕ್ತರಾಗಿ ಎನ್ನುತ್ತಾನೆ. ಆತ್ಮಮೌನದ ನೀರವತೆಯಲ್ಲಿ "ಕೇವಲನೂ, ನಿರಂಜನನೂ, ಶುದ್ಧನೂ, ಎಲ್ಲದರ ಆಧಾರನೂ, ಆಶ್ರಿತನೂ, ಯಾವಾತನ ದರ್ಶನ ಭಾಗ್ಯಕ್ಕಾಗಿ ಎಲ್ಲವೂ ಕಾತುರವಾಗಿರುವುವೋ ಎಲ್ಲ ಜೀವಕ್ಕೂ ಜ್ಞಾನಕ್ಕೂ ಎಲ್ಲದರ ಅರಿವಿಗೂ ಯಾವನು ಉಗಮಸ್ಥಾನವಾಗಿರುವುವೋ ಆ ಏಕಮೇವಾದ್ವಿತೀಯವಾದ ಪರಾತ್ಪರನ ದರ್ಶನವನ್ನು ಪಡೆಯಿರಿ" ಎನ್ನುತ್ತಾನೆ. ಒಂದು ಮಂತ್ರವನ್ನು ಆರಿಸಿಕೊಳ್ಳುತ್ತೇವೆ. ಉಚ್ಚರಿಸುತ್ತೇವೆ. ಅದನ್ನು ಧ್ಯಾನಮಾಡುತ್ತೇವೆ. ನಮ್ಮ

ಅಂತರಾತ್ಮವು ನೀರವತೆಯಲ್ಲಿ ಕಾದು ನಿಲ್ಲುತ್ತದೆ. ಈಶ್ವರನಿಗಾಗಿ ಪವಿತ್ರ ಪೀಠವನ್ನು ಸಜ್ಜುಗೊಳಿಸುತ್ತದೆ. ಈಶ್ವರ ಜೀವನವೆಲ್ಲದರ ಆಧಾರವಾಗಿ ನಮ್ಮ ಅನುಭವದ ವಿಷಯವಾಗುತ್ತಾನೆ. ಮಾನವ ನಮ್ರನಾಗಿ ಈಶ್ವರನಿಗೆ ಶರಣಾಗತನಾಗುತ್ತಾನೆ. ಪವಿತ್ರಾತ್ಮನ ಸಮ್ಮುಖದಲ್ಲಿ ನಾವು ನಿಂತಾಗ ನಾವು ಸ್ತಬ್ಧರಾಗುತ್ತೇವೆ, ಸ್ತುತಿಸ್ತೋತ್ರಗಳನ್ನೂ ಮೀರಿದ ಅವನ ಕಲ್ಯಾಣ ಗುಣಾನುಭವದಲ್ಲಿ ಮುಳುಗಿ ಹೋಗುತ್ತೇವೆ.

ಬದ್ಧ ಜೀವಿಗಳಾದ ನಮ್ಮ ಬಂಧನಾನುಭವದಲ್ಲಿ ಧ್ಯಾನ ನಮ್ಮ ಬಿಡುಗಡೆ. ವಿಧಿಯ ವೀಚಿಗಳಿಗೆ ಸಿಕ್ಕದ ಆತ್ಮತತ್ವಕ್ಕೆ ಇದು ಸಾಕ್ಷಿ. ಬಾಹ್ಯ ಸನ್ನಿವೇಶಗಳು ಎಷ್ಟು ಅಹಿತವಾಗಿದ್ದರೂ ಆತ್ಮನಲ್ಲಿ ಸ್ವರೂಪ ಸಿದ್ಧವಾದ ಸ್ವಾತಂತ್ರ್ಯ ಉಳಿದೇ ಇರುತ್ತದೆ. ಸಮಾಧಿ ಸ್ಥಿತಿಯಲ್ಲಿ ನಿರುಪಾಧಿಕವಾದ ಪರಬ್ರಹ್ಮನ ಸಂಸ್ಪರ್ಶ ಪಡೆಯುತ್ತೇವೆ. ಪರತತ್ವದ ಸಾಕ್ಷಾತ್ಕಾರಕ್ಕಾಗಿ ನಾವು ನಿಷ್ಠೆ ತಾಳಿದವರಾದರೆ, ನಿರುಪಾಧಿಕ ಆನಂದ, ಅನಿರೀಕ್ಷಿತ ಪ್ರಜ್ಞೆ, ಅಧ್ಯಾತ್ಮ ಶಕ್ತಿ ಸ್ವಾತಂತ್ರ್ಯಗಳ ನೂತನ ಅನುಭವಗಳು ನಮ್ಮದಾಗುತ್ತವೆ. ಇವು ನಮ್ಮ ಎಲ್ಲ ಕ್ರಿಯೆಗಳನ್ನೂ ಬೆಳಗುತ್ತವೆ. ಮತ್ತು ಚೈತನ್ಯಗೊಳಿಸುತ್ತವೆ. ಇವರ ವಿಷಯವಾಗಿ ತಾರ್ಕಿಕವಾದಗಳು ಆಶ್ವಾಸನೆ ಕೊಡಬಲ್ಲವು. ಆದರೆ ನೇರ ಅನುಭವ ಮಾತ್ರ ದೃಢ ನಿಶ್ಚಯವನ್ನು ನೀಡಬಲ್ಲದು. ಯೋಗದ ಯಮನಿಯಮಗಳ ಫಲವಾಗಿ, ದೇಹ, ಮನಸ್ಸು, ಅನುರಾಗಗಳು, ಅನುಭಾವಗಳು ಸಮರಸ ಹೊಂದುವವು. ಆಗ ವ್ಯಕ್ತಿಯನ್ನು ತನ್ನ ತಡೆಯಿಲ್ಲದ ವಾಹನವನ್ನಾಗಿ ಆರಿಸಿಕೊಂಡು ಅವನ ಮೂಲಕ ತನ್ನ ಪ್ರಕಾಶವನ್ನು ಬೀರುತ್ತದೆ.

## ೫. ಸತ್ಯ ಮತ್ತು ಪ್ರೇಮ

ಬ್ರಹ್ಮ ಜಗತ್ತುಗಳು ಪರಸ್ಪರ ಭಿನ್ನವಲ್ಲ. ಬ್ರಹ್ಮಸಾಧನ ಪ್ರೇಮದಲ್ಲಿ ವ್ಯಕ್ತಗೊಳ್ಳುತ್ತದೆ. ಪ್ರೇಮದಲ್ಲಿ ಮಾತ್ರ ಒಬ್ಬರನ್ನೊಬ್ಬರು ಚೆನ್ನಾಗಿ ಅರಿಯಬಲ್ಲರು. ಪ್ರೇಮಸ್ವರೂಪಿಯಾದ ಬ್ರಹ್ಮದ ಮೂಲಕ ಮಾತ್ರ ಇದು ಸಾಧ್ಯ. ನಾವು ಕೂಡ ಸತ್ಯವನ್ನು ಜಗತ್ತಿನಲ್ಲಿ ನಾವಿರುವ ರೀತಿಯಲ್ಲಿ, ನಮ್ಮ ಆಲೋಚನೆಗಳಲ್ಲಿ, ನಮ್ಮ ಚರ್ಯೆಯಲ್ಲಿ ವಿಕಸನಗೊಳಿಸುತ್ತೇವೆ. ಪಾರ್ಥಿವ ಜೀವನ ಎಲ್ಲ ಜೀವನದ ಅಂತ್ಯವಲ್ಲದಿದ್ದರೂ, ಅದು ನಶ್ವರವಾಗಿದ್ದರೂ ಸಹ

ಇದರಲ್ಲಿಯೇ ಮರ್ತ್ಯಲೋಕಾತೀತವಾದ, ಅಮರವಾದ ಭಾವ ಬಂಧಗಳನ್ನು ನಿರ್ಮಿಸಿ ಅವುಗಳ ಸವಿಯನ್ನು ಅನುಭವಿಸುವುದು ಸಾಧ್ಯ. ಅಂತರ್ಜ್ಯೋತಿ ಸರ್ವ ವ್ಯಾಪಕವಾದದ್ದು. ಪ್ರತಿ ಮಾನವನಲ್ಲೂ ಅದರ ಕಿಡಿ ಇದೆ. ಈಶ್ವರನ ಪ್ರತಿಬಿಂಬವನ್ನು ಎಷ್ಟು ಮುಸುಕು ಮಾಡಿದರೂ ಅದನ್ನು ಪೂರ್ತಿ ಅಳಿಸಲು ಸಾಧ್ಯವಿಲ್ಲ. ಏಕೆಂದರೆ ಅದು ಮನುಷ್ಯನ ಸ್ವಭಾವದಲ್ಲಿ ಅಂತರ್ಗತವಾಗಿದೆ. ಎಷ್ಟು ದುರಾಚಾರಿಯಾದರೂ, ಎಂತಹ ಕಡುಪಾಪಿಗೂ, ಸನ್ಮಾರ್ಗದ ಲಾಭ ಇದೆ. ನಿತ್ಯನರಕವೆಂಬುದಿಲ್ಲ. ಈಶ್ವರ ಕೆಲವು ಅಸಂಖ್ಯಾತ ಸ್ತ್ರೀ ಪುರುಷ ಚೇತನರನ್ನು ಎಂದೆಂದಿಗೂ ಕೈಬಿಟ್ಟಿದ್ದಾನೆಂದು ನಂಬುವುದು ಕಷ್ಟ. ಅಂತರ್ಜ್ಯೋತಿ ಎಲ್ಲರನ್ನೂ ಶಾಂತಿ, ಪ್ರಸನ್ನತೆ, ಆನಂದಗಳ ಕಡೆಗೆ ಕರೆಯುತ್ತದೆ. ಭಗವಂತನು ಆರಿಸಿದ ಜನ (elect people of God) ಅನ್ನುವ ಕಲ್ಪನೆಗೆ ಈ ಅಭಿಪ್ರಾಯ ಆಸರೆ ನೀಡುವುದಿಲ್ಲ. ಬುದ್ಧಿಪೂರ್ವಕವಾಗಿ ಈ ಬೆಳಕಿನಲ್ಲಿ ನಡೆಯುವವರೆಲ್ಲರೂ ಉದ್ಧಾರವಾಗುತ್ತಾರೆ. ಹಾಗೆ ನಡೆಯದವರು ಮುಂದೆಂದಾದರೂ ಉದ್ಧಾರವಾಗುತ್ತಾರೆ; ಅವರು ಎಂದೆಂದಿಗೂ ಗತಿ ಕೆಟ್ಟವರಾಗುವುದಿಲ್ಲ. ಪ್ರತಿ ಆತ್ಮನಲ್ಲಿಯೂ ಪ್ರತ್ಯಗಾತ್ಮನನ್ನು ನಾವು ಕಂಡಾಗ ಸೃಷ್ಟಿಯಲ್ಲಿ ಕನಿಷ್ಠತಮ ಜಂತುವನ್ನೂ ನಮ್ಮಂತೆಯೇ ಪ್ರೀತಿಸುತ್ತೇವೆ. ಇದು ಎಲ್ಲ ಮತಗಳೂ ಬೋಧಿಸುವ ಸುವರ್ಣಸೂತ್ರ.

ಮಹಾಭಾರತ ಹೇಳುತ್ತದೆ. "ಸಂಪತ್ತಿನಲ್ಲಿ ಮತ್ತು ವಿಪತ್ತಿನಲ್ಲಿ, ಸುಖದಲ್ಲಿ ದುಃಖದಲ್ಲಿ, ಇತರರ ವಿಷಯದಲ್ಲಿ ಆತ್ಮಸಮ್ಯಭಾವದಿಂದ ನಡೆದುಕೊಳ್ಳಬೇಕು." ವೃಕ್ಷಗಳು ಫಲಗಳನ್ನು ನೀಡುವುದು, ನದಿಗಳು ತೀರ್ಥವನ್ನು ಒಯ್ಯುವುದು, ಗೋವುಗಳು ಹಾಲು ಕರೆಯುವುದು, ಸಜ್ಜನರು ಬಾಳುವುದು ಇವೆಲ್ಲಾ ಇತರರಿಗಾಗಿ.*

ಕುಂಗ್‌ಫೂಷೆಯನ್ನು 'ಇಡೀ ಜೀವನಕ್ಕೆ ಅನ್ವಯಿಸುವ ಒಂದು ಮೂಲಸೂತ್ರ ಇದೆಯೇ?' ಎಂದು ಪ್ರಶ್ನೆ ಕೇಳಿದಾಗ ಅದಕ್ಕೆ ಹೀಗೆ ಉತ್ತರವಿತ್ತನು. 'ಇದು 'ಷೂ' ಅನ್ನುವ ಒಂದು ಮಾತಿನಲ್ಲಿ ಅಡಗಿದೆಯಲ್ಲವೇ,

* ಪರೋಪಕಾರಾಯ ಫಲಂತಿ ವೃಕ್ಷಾಃ । ಪರೋಪಕಾರಾಯ ವಹಂತಿ ನದ್ಯಾಃ । ಪರೋಪಕಾರಾಯ ದುಹಂತಿ ಗಾವಾಃ । ಪರೋಪಕಾರಾಯ ಸತಾಂಹಿ ಜೀವನಮ್ ॥

ಅಂದರೆ ಪರರು ನಮ್ಮೊಡನೆ ಹೇಗೆ ನಡೆದುಕೊಳ್ಳಬೇಕೆಂದು ಬಯಸುವೆವೋ ಹಾಗೆ ನಾವು ಅವರೊಡನೆ ನಡೆದುಕೊಳ್ಳಬೇಕು.' ಇದನ್ನೇ ಅವನ ಶಿಷ್ಯನೊಬ್ಬ ಸೆಂಗ್‌ಸೆ, ಹೀಗೆ ಅನುವಾದ ಮಾಡಿದ್ದಾನೆ, "ನಮ್ಮನ್ನು ಯಾವ ಹೃದಯದಿಂದ ಪ್ರೀತಿಸುವೆವೋ ಅದೇ ಹೃದಯದಿಂದ ಇತರರನ್ನು ಪ್ರೀತಿಸುವುದು."

ಲೆವಿಟಿಕಸ್ ಗ್ರಂಥದ ಹತ್ತೊಂಬತ್ತನೆಯ ಅಧ್ಯಾಯದಲ್ಲಿ ಉಲ್ಲೇಖಿಸಿರುವ "ನಿನ್ನ ನೆರೆಹೊರೆಯವನನ್ನು ನಿನ್ನಂತೆ ಪ್ರೀತಿಸು" ಅನ್ನುವ ಆದೇಶ ಬೈಬಲಿನ ೬೧೩ ಆದೇಶಗಳೆಲ್ಲಕ್ಕೂ ಹೆಚ್ಚಿನದೆಂದು ಹೇಳಿದೆ. ಹೊಸಿಯಾ ಪ್ರವಾದಿ ಪ್ರೇಮ, ಕರುಣೆ, ಸಹನೆ ಇವುಗಳನ್ನು ಕುರಿತು ಪ್ರಸ್ತಾಪಿಸಿದ್ದಾನೆ. ಅವನು ತನ್ನ ತಪ್ಪು ಎಸಗಿದ ಸತಿಯನ್ನು ಕ್ಷಮಿಸಿದ; ಅವಳ ಮೇಲಿನ ಪ್ರೇಮದ ಸಲುವಾಗಿ. ಈಶ್ವರನು ಮಾನವರನ್ನು ಪ್ರೀತಿಸುತ್ತಾನೆ, ಅದರ ಸಲುವಾಗಿ ಅವರ ತಪ್ಪುಗಳನ್ನು ಕ್ಷಮಿಸುತ್ತಾನೆಂದು ನಂಬಿದನು. ಮೊಸೇಯಿಕ್ ಶಾಸನದ ಪ್ರಕಾರ ತನ್ನ ಕುಲದಲ್ಲಿ ಹುಟ್ಟಿದವರಿಗೆ ಒಂದು ಶಾಸನ, ಕುಲಕ್ಕೆ ಹೊರತಾದವರಿಗೆ ಮತ್ತೊಂದು ಶಾಸನ. "ಈಜಿಪ್ಟ್ ಪ್ರದೇಶದಲ್ಲಿ ನೀವು ಹೊರತಾಗಿದ್ದುದನ್ನು ನೆನಪಿಗೆ ತಂದುಕೊಳ್ಳಿ". ಹಳೇ ಒಡಂಬಡಿಕೆಯಲ್ಲಿ ಈ ಮಾತು ಓದುತ್ತೇವೆ. "ನಮಗೆಲ್ಲರಿಗೂ ಒಬ್ಬನೇ ತಂದೆಯಿಲ್ಲವೇ? ಒಬ್ಬನೇ ದೇವರು ನಮ್ಮೆಲ್ಲರನ್ನೂ ಸೃಷ್ಟಿಸಿಲ್ಲವೇ?" ಹಿಲ್ಲೆಲ್ ಪ್ರಕಾರ, "ನಿನಗೆ ಯಾವುದು ಅಹಿತವೋ ಅದನ್ನು ನಿನ್ನ ಜೊತೆ ಹುಟ್ಟಿದುವ ಇತರ ಜಂತುಗಳಿಗೆ ಮಾಡಬೇಡ."

ಅಹಿಂಸೆ ಅಥವಾ ಎಲ್ಲ ಸೃಷ್ಟಿಯ ಮೇಲಿನ ಪ್ರೇಮ ಜೈನಧರ್ಮದ ಮೂಲತತ್ವ. ಬುದ್ಧ, ಬೋಧಿಯನ್ನು ಪಡೆದ ನಂತರ, ತನ್ನ ಜೀವಿತದ ಉಳಿದ ಕಾಲವನ್ನೆಲ್ಲಾ, ತನ್ನ ಮಿತ್ರರಿಗೆ ನಿರ್ವಾಣ ಪ್ರಾಪ್ತಿಯನ್ನು ಪಡೆಯುವುದು ಹೇಗೆಂದು ಬೋಧಿಸುತ್ತಾ ಕಳೆದ. ಮಾತೃಜೇತ ಬುದ್ಧನನ್ನು ಈ ಮಾತುಗಳಲ್ಲಿ ವರ್ಣಿಸುತ್ತಾನೆ; "ನಿನಗೆ ಕೇಡನ್ನು ಬಯಸುವ ಶತ್ರುವಿಗೆ ಹಿತವನ್ನು ಕೋರುವ ಮಿತ್ರ ನೀನು ; ಇತರರ ತಪ್ಪನ್ನು ಹುಡುಕುವುದೇ ಉದ್ಯೋಗವನ್ನಾಗಿ ಉಳ್ಳವರಲ್ಲಿ ನೀನು ಸದ್ಗುಣಗಳನ್ನು ಕಾಣಲು ಯತ್ನಿಸುತ್ತೀಯೆ." ಶಾಂತಿದೇವ ಬೋಧಿಸತ್ತ್ವತತ್ತ್ವವನ್ನು ಈ

ಸುಂದರವಾದ ಮಾತುಗಳಲ್ಲಿ ವರ್ಣಿಸುತ್ತಾನೆ.

"ನನ್ನ ಕರ್ಮಗಳಿಂದ ಗಳಿಸಿರುವ ನಾ ಬಯಸುವ ಪುಣ್ಯ ಫಲವೆಂದರೆ ದುಃಖ ತಪ್ತರಾದ ಪ್ರಾಣಿಗಳೆಲ್ಲದರ ಆರ್ತಿಶಮನ.

ರೋಗಿಗಳ ರೋಗಶಮನ ಶುಶ್ರೂಷೆಗಳು ರೋಗಗಳಿರುವವರೆಗೂ ನನ್ನದಾಗಿರಲಿ. ಹಸಿವೆ ನೀರಡಿಕೆಗಳಿಂದ ಬಳಲಿದವರನ್ನು ತಣಿಸುವಂತಾಗಲಿ.

ಕಾಲಕ್ರಮದಲ್ಲಿ ಪ್ರಾಪ್ತವಾಗುವ ಕ್ಷಾಮದಲ್ಲಿ ನಾನೇ ಅವರ ಆಹಾರ ಪಾನೀಯ ಆಗುವಂತಾಗಲಿ.

ನಾನು ಎಂದೆಂದಿಗೂ ಮುಗಿಯದ ಬಡವರ ಉಗ್ರಾಣವಾಗಲು ಬಯಸುತ್ತೇನೆ, ಅವರಿಗೆ ಬೇಕಾದುದೆಲ್ಲವನ್ನೂ ಒದಗಿಸಬಲ್ಲವನಾಗಲು ಬಯಸುತ್ತೇನೆ.

ನನ್ನ ಪ್ರಾಣ, ನನ್ನ ಸುಖ, ನನ್ನ ಹಿಂದಿನ, ಇಂದಿನ, ಮುಂದಿನ ಪುಣ್ಯ ಸಂಚಯವನ್ನೆಲ್ಲಾ ಅವರೆಲ್ಲರಿಗಾಗಿ ಎಲ್ಲ ಜೀವಜಂತುಗಳ ಜಯಕ್ಕಾಗಿ ಧಾರೆ ಎರೆದಿದ್ದೇನೆ.

ಶಾಂತಿ ಎಲ್ಲದರ ತ್ಯಾಗದಲ್ಲಿದೆ, ಆ ಶಾಂತಿಯನ್ನು ಬಯಸುತ್ತದೆ ನನ್ನ ಆತ್ಮ. ಸರ್ವವನ್ನೂ ಸಮರ್ಪಣೆ ಮಾಡಬೇಕಾದರೆ, ಇವೆಲ್ಲವನ್ನೂ ನನ್ನ ಜೊತೆಯ ಜೀವ ಜಂತುಗಳಿಗೆ ಅರ್ಪಣೆ ಮಾಡುವುದು ಒಳ್ಳೆಯದು.

ಯಾವ ಜೀವ ಜಂತುವಾದರೂ ನನ್ನನ್ನು ಏನು ಬೇಕಾದರೂ ಮಾಡಲಿ; ನನ್ನನ್ನು ಕಾಡಿಸಿದರೂ ಸರಿ, ನಿಂದಿಸಿದರೂ ಸರಿ, ನನ್ನ ಮೇಲೆ ಮಣ್ಣೆಸದರೂ ಸರಿ, ನನ್ನ ದೇಹದೊಡನೆ ಏನು ಸರಸವಾಡಿದರೂ ಸರಿ, ನಾನು ಲಕ್ಷ್ಯ ಮಾಡುವುದಿಲ್ಲ, ಏಕೆಂದರೆ ನನ್ನ ಇಡೀ ದೇಹವನ್ನೇ ಅವರಿಗೆ ತೆತ್ತು ಬಿಟ್ಟಿದ್ದೇನೆ. ನನ್ನನ್ನು ಹಳಿಯುವವರಿಗೂ, ಜರಿಯುವವರಿಗೂ, ಪೀಡಿಸುವವರಿಗೂ, ನನ್ನ ಬೋಧೆಯಲ್ಲಿ ಒಂದು ಪಾಲಿದೆ.

ಯಾರಿಗೆ ರಕ್ಷಣೆ ಇಲ್ಲವೋ ಅವರ ರಕ್ಷಕ ನಾನು, ದಾರಿಹೋಕರಿಗೆ ದಾರಿ ತೋರಿಸುವವ, ಎದುರಿನ ದಡ ಮುಟ್ಟಲು ಬಯಸುವವರಿಗೆ ನಾನೊಂದು ಸೇತುವೆ; ದೀಪ ಬೇಕಾದವರಿಗೆ ದೀಪ, ಹಾಸಿಗೆ ಬೇಕಾದವರಿಗೆ ಹಾಸಿಗೆ, ಗುಲಾಮ ಬೇಕಾದವರಿಗೆ ಗುಲಾಮ."

ಮ್ಯಾಥ್ಯೂ ಸುವಾರ್ತೆಯಲ್ಲಿ ಹೀಗೆ ಹೇಳಿದೆ, "ಪರರಿಂದ ನೀನು ಏನನ್ನು

ಬಯಸುವೆಯೋ ಅದನ್ನು ಅವರಿಗೆ ಮಾಡು". "ನಿನ್ನನ್ನು ಪ್ರೀತಿಸಿದವರನ್ನು ಪ್ರೀತಿಸು"ವುದು ಸಾಲದು. ಇದಕ್ಕಿಂತಲೂ ಉತ್ಕೃಷ್ಟವಾದದ್ದು "ನಿನ್ನ ಶತ್ರುಗಳನ್ನು ಪ್ರೀತಿಸು, ನಿನ್ನನ್ನು ದ್ವೇಷಿಸುವವರಿಗೆ ಒಳ್ಳೆಯದನ್ನು ಮಾಡು, ನಿನ್ನನ್ನು ಅಸಡ್ಡೆಯಿಂದ ಕಾಣುವವರಿಗಾಗಿ, ಪೀಡೆಗೆ ಒಳಪಡಿಸುವವರಿಗಾಗಿ ಪ್ರಾರ್ಥನೆ ಮಾಡು."

ಸಾದಿ ಬರೆಯುತ್ತಾನೆ.

"ಪರಮಾತ್ಮನ ಔದಾರ್ಯ ಕೃಪೆ ನೋಡಿ ಪಾಪಮಾಡಿದವನು ಅವನ ಗುಲಾಮು, ಆ ಅವಮಾನವನ್ನು ಸಹಿಸುತ್ತಿರುವವನು ಅವನು."

ಫರಿದ್, ನಿನ್ನನ್ನು ಯಾರಾದರೂ ಹೊಡೆದರೆ ಅವನನ್ನು ಹಿಂತಿರುಗಿ ಹೊಡೆಯಬೇಡ, ಅವನ ಪಾದಗಳನ್ನು ಚುಂಬಿಸು.

ಫರಿದ್, ನೀನು ಎಲ್ಲಕ್ಕಿಂತಲೂ ಹೆಚ್ಚಾಗಿ ಜಗದೊಡೆಯನನ್ನು ಬಯಸುವಿಯಾದರೆ,

ಎಲ್ಲರೂ ತುಳಿಯಲು ಹುಲ್ಲಾಗು.

ಫರಿದ್, ಹೀಗೆ ಒಬ್ಬ ನಿನ್ನನ್ನು ಮುರಿದಾಗ ಮತ್ತೊಬ್ಬ ನಿನ್ನನ್ನು ತುಳಿದಾಗ ಸ್ವಾಮಿಯ ಸನಿಹಕ್ಕೆ ನಿನಗೆ ಪ್ರವೇಶ ಉಂಟು".

## ೬. ಪ್ರಪಂಚದ ಬಾಳ್ವೆ ಮತ್ತು ಪವಿತ್ರತೆ

ಪವಿತ್ರತೆ ಪಾರಮಾರ್ಥಿಕ ಜೀವನದ ಪ್ರಾಮಾಣಿಕವಾದ ಗುರುತು. ಸಾಮಾನ್ಯ ಜನರು ಬೆಲೆಯುಳ್ಳವೆಂದು ಭಾವಿಸುವ ಖ್ಯಾತಿ, ಲಾಭ, ಪೂಜೆಗಳ ವಿಷಯದಲ್ಲಿ ಪವಿತ್ರಾತ್ಮರು ಕೇವಲ ಉದಾಸೀನರು. ಈ ಪವಿತ್ರಾತ್ಮರು ಗುಣ ಕರ್ಮಗಳಲ್ಲಿ ಪರಸ್ಪರ ಭಿನ್ನರಾಗಿದ್ದರೂ, ಸಂತ ಫ್ರಾನ್ಸಿಸ್, ರಾಮಕೃಷ್ಣ ಪರಮಹಂಸ, ಮಹಾತ್ಮ ಗಾಂಧಿ ಒಂದೇ ಸಂತ ಕುಲಕ್ಕೆ ಸೇರಿದ ಸಮಾನ ಲಕ್ಷಣಗಳನ್ನು ಹೊರಸೂಸುತ್ತಾರೆ. ಅವರಲ್ಲಿ ಮಾನವ ಸ್ವಭಾವದ ಅಂತರಾಳದ ಜ್ಞಾನವಿದೆ, ನಿಷ್ಕಾಪಟ್ಯವಿದೆ, ಗಾಢವಾದ ಭಗವದನುರಾಗ, ಮಾನವಾನುಕಂಪಗಳಿವೆ.

ಸಂತ ಈ ಲೋಕದಲ್ಲಿ ನಿಷ್ಕ್ರಿಯನಾಗಿ ಬಾಳುವುದಿಲ್ಲ. ಪರಿಮಿತ ಪ್ರಪಂಚದ ಮೌಲ್ಯಗಳನ್ನು ಅರ್ಥಗಳನ್ನು ಬದಿಗೊತ್ತುವುದಿಲ್ಲ. ದಿವ್ಯ

ಜೀವನದಲ್ಲಿ ಪಾಲುಗೊಂಡಿದ್ದರೂ ತನ್ನತನವನ್ನು ಕಳೆದುಕೊಂಡಿಲ್ಲ. ಅಂದರೆ ಮಾತ್ರ ಪ್ರಪಂಚದ ಒಂದು ಅಂಶವಾಗಿರುವ ಬದಲು, ಅದರ ಬುನಾದಿ ಯಾಗಿರುತ್ತಾನೆ. ಅವನು ದೇಹಧಾರಿಯಾಗಿರುವವರೆಗೂ ದ್ವಂದ್ವಾತೀತ ನಾಗಲು ಸಾಧ್ಯವಿಲ್ಲ. ಸಮಷ್ಟಿತತ್ವ ವ್ಯಷ್ಟಿ ಶಕ್ತಿಗಳ ಮೂಲಕ ವಿಕಸನ ಗೊಳ್ಳುತ್ತದೆ, ವ್ಯಷ್ಟಿಗಳನ್ನು ಸಮಷ್ಟಿ ನುಂಗಿಬಿಡುವುದಿಲ್ಲ. ಜೀವನ್ಮುಕ್ತರ ಜೀವನ ನೀತಿ ಪರಮಾರ್ಥದ ಒಂದು ಛಾಯೆ. ತನ್ನ ರುಗ್ಣ ಸಹೋದರನ ಗಂಟಲು ಒಣಗಿದಾಗ ಅವನ ದಾಹ ಶಮನಕ್ಕೆ ತೀರ್ಥ ನೀಡಲು ಸಂತ ಸದಾ ಸಿದ್ಧನಾಗಿರುತ್ತಾನೆ. ಜೀವನದ ಒಂದೊಂದು ಸನ್ನಿವೇಶವೂ ಈ ಅಂತರಂಗದ ಅನುತಾಪಕ್ಕೆ, ಕ್ರಿಯಾತ್ಮಕ ಕರುಣೆಗೆ, ನೀಡಿದ ಅವಕಾಶ. ವಿಶ್ವದೊಡನೆ ಸಮರಸಗೊಂಡಾಗ ಹೀಗಾಗುವುದು ಸಹಜ, ಟ್ರೇಹರ್ನ್ ಹೇಳುವಂತೆ, "ಸಾಗರಗಳೇ ನಮ್ಮ ಧಮನಿಯಲ್ಲಿ ಹರಿಯುತ್ತವೆ. ನಕ್ಷತ್ರ ಗಳೇ ನಮ್ಮ ಆಭರಣಗಳಾಗುತ್ತವೆ." ಎಲ್ಲ ವಸ್ತುಗಳೂ ಪವಿತ್ರಮಯ ವಾದಾಗ ಲುಬ್ಧತೆಗಾಗಲಿ, ಸ್ವಪ್ರತಿಷ್ಠೆಗಾಗಲಿ, ಅಧಿಕಾರ ಲಾಲಸೆಗಾಗಲಿ, ವಿಷಯ ಲೋಲುಪತೆಗಾಗಲಿ ಅವಕಾಶವಿಲ್ಲ.

ಆತ್ಮನಿಗಾಗಿ ಎಲ್ಲವನ್ನೂ ತ್ಯಾಗಮಾಡಿದಾಗ, ಎಲ್ಲವೂ ತನ್ನನ್ನೇ ಇನ್ನೊಂದು ಬೃಹತ್ ಪ್ರಮಾಣದಲ್ಲಿ ಬಂದು ಸೇರುವುವು. ಜಗತ್ತಿನ ವಸ್ತುಗಳನ್ನು ತ್ಯಜಿಸದೆ ಅವನ್ನೇ ಅನಾಸಕ್ತಭಾವದಿಂದ ಅನುಭವಿಸಿದಾಗ ಒಂದು ಹೊಸ ಸಂತೋಷ ಹುಟ್ಟುತ್ತದೆ. ಲೋಕ ಸಂಗ್ರಹಕ್ಕಾಗಿ ಜನ್ಮ ವೆತ್ತುವ ಜೀವಾತ್ಮನು ಪ್ರಶಾಂತಾತ್ಮರಾಗಿ, ಸ್ವಚ್ಛಚಿತ್ತರಾಗಿ, ಭಗವಂತನ ಸಾಯುಜ್ಯಾನುಭವದಲ್ಲಿ ಪಾಲುಗೊಂಡು ಜಗತ್ತಿನ ಉದ್ಧಾರಕ್ಕಾಗಿ, ಅದರ ಉಜ್ಜೀವನಕ್ಕಾಗಿ ಶ್ರಮಿಸುತ್ತಾರೆ. ಜಗತ್ತಿನ ಭಾರವನ್ನು ತಮ್ಮ ಹೆಗಲಿನ ಮೇಲೆ ಹಗುರವಾಗಿ ಹೊರುತ್ತಾರೆ. "ಜೇನು ಮಧುವನ್ನು ಹೊರು ವಂತೆ, ಜೇಡ ತಂತುಗಳನ್ನು ತಾಳುವಂತೆ." ತಮ್ಮ ಕುಟುಂಬ, ಕುಲ ಮತ ರಾಷ್ಟ್ರ ಇವುಗಳ ಮೇಲಿನ ಸಂಕುಚಿತ ಅಭಿಮಾನವನ್ನು ತೊರೆದು ಇಡೀ ಮಾನವ ಕುಲವನ್ನು ಪ್ರೀತಿಸುತ್ತಾರೆ. ಅವರಲ್ಲಿ ಕಾಲ ದೇಶಾತೀತವಾದ ಸರ್ವ ವ್ಯಾಪಕವಾದ ತತ್ವ ಮೂರ್ತಿವೆತ್ತಿರುತ್ತದೆ. ಇದರ ಪ್ರಕಾಶ ಅವರ ಬಾಹ್ಯಜೀವನದಲ್ಲಿ ತೋರುತ್ತದೆ. ಲೋಕ ಸಂಗ್ರಹಕ್ಕಾಗಿ

ಅವರ ಕರ್ಮ ಮೀಸಲಾಗಿದೆ. ಮಹಾಯಾನ ಸಿದ್ಧಾಂತದ ಬೋಧಿಸತ್ತ್ವ ಕರ್ಮ ಬಂಧಕ್ಕೆ ಒಳಗಾಗದಿದ್ದರೂ ಲೋಕದಲ್ಲೇ ಜನ್ಮವೆತ್ತಿ ಚೇತನರ ಮುಕ್ತಿಗಾಗಿ ದುಡಿಯುತ್ತಾನೆ. ಏಕೆಂದರೆ ಸೃಷ್ಟಿಯೆಲ್ಲ ಅವಿಭಾಜ್ಯವಾದುದು. "ನನ್ನ ಮೇಲೆ ಕಟ್ಟಳೆಯೊಂದಿದೆ" ಎನ್ನುತ್ತಾನೆ ಸಂತಪಾಲ್. ಲೂಥರ್ ಹೇಳುತ್ತಾನೆ: "ಇಲ್ಲಿ ನಡುಕಟ್ಟಿ ನಿಂತಿದ್ದೇನೆ; ನಾನು ಇನ್ನೇನನ್ನೂ ಮಾಡಲಾರೆ." ಅವರನ್ನು ಮೀರಿದ ಪರಾಶಕ್ತಿಯೊಂದಕ್ಕೆ ಅವರು ಸಂಪೂರ್ಣ ಅಧೀನರಾಗುತ್ತಾರೆ.

ಜ್ಞಾನಯೋಗಿಗಳಿಗೂ ಕರ್ಮಯೋಗಿಗಳಿಗೂ ನಿರ್ದಿಷ್ಟ ಕಟ್ಟಳೆ ಏನಿಲ್ಲ. ಮೃದು ಸ್ವಭಾವದ ಚೇತನರು ಜಗತ್ತಿನ ಸಡಗರ ಝುಂಝಾಟ ಗಳಿಂದ ವಿಮುಖರಾಗಬಹುದು. ಹಾಗೆ ವಿಮುಖರಾಗುವುದೆಂದರೆ ಪ್ರಪಂಚ ದಿಂದ ಪಲಾಯನವೆಂದು ಅರ್ಥವಲ್ಲ. ಜ್ಞಾನದ ತಪಶ್ಶಕ್ತಿಯಿಂದಲೇ ಸಮಾಜದಮೇಲೆ ಅವರು ಪರಿಣಾಮ ಮಾಡುತ್ತಾರೆ. ಅಂತರಾತ್ಮನ ಕರೆಗೆ ಓಗೊಟ್ಟು ಜಗತ್ತಿನಿಂದ ನಿವೃತ್ತರಾಗಬಹುದು. ಜಗತ್ತಿನ ವ್ಯವಹಾರಗಳಲ್ಲಿ ಸಿಕ್ಕಿಬೀಳುತ್ತೇವೆಂಬ ಭಯದಿಂದ ಜೀವನದಿಂದ ಹಿಮ್ಮೆಟ್ಟಿದರೆ ಇದು ಸರಿ ಯಲ್ಲ.

ದಿವಸದಲ್ಲಿ ಸ್ವಲ್ಪಕಾಲ ಏಕಾಂತದಲ್ಲಿ ಇರುವುದು ನಮ್ಮ ಆಧ್ಯಾತ್ಮಿಕ ಬೆಳವಣಿಗೆಗೆ ಸಹಾಯವಾಗುತ್ತದೆ. ವಾರಕ್ಕೆ ಒಮ್ಮೆ ವಿಶ್ರಾಂತರಾಗಬೇಕು. ಪ್ರತಿದಿನದಲ್ಲಿ ಕೆಲವು ನಿಮಿಷಗಳು ಧ್ಯಾನಾಸಕ್ತರಾಗಿರಬೇಕು ಅನ್ನುವ ಉಪದೇಶಗಳಲ್ಲಿ ಹೆಚ್ಚು ವಿವೇಕವಿದೆ. ಆದರೆ ಇದಕ್ಕಾಗಿ ನಾವು ಸನ್ಯಾಸಿಗ ಳಾಗಬೇಕಾಗಿಲ್ಲ. ಸಂಸಾರದಲ್ಲಿದ್ದೇ ಈ ಮನೋಭಾವವನ್ನು ಬೆಳಿಸಿಕೊಳ್ಳು ವುದಕ್ಕೆ ಅವಕಾಶವಿದೆ. ಬುದ್ಧನ ಸಮಕಾಲೀನನಾದ ಅನಾಥಪಿಂಡಿಕಾ ಎಂಬ ಶ್ರೀಮಂತ ಬುದ್ಧನ ಬಳಿಗೆ ಬಂದು ತಾನು ಸನ್ಯಾಸಿಯಾಗಲು ಬಯ ಸುತ್ತೇನೆಂದು ಹೇಳಿದ. ಬುದ್ಧ ಅವನ ಮಾತುಗಳನ್ನು ಕೇಳಿ ಹೀಗೆಂದ: "ನಾನು ಹೇಳುತ್ತೇನೆ ಕೇಳು, ನೀನು ಇರುವಲ್ಲಿಯೇ ಇರು ಮತ್ತು ನಿನ್ನ ವೃತ್ತಿಯಲ್ಲಿ ನಿಷ್ಠೆಯಿಂದ ತೊಡಗಿರು. ಪ್ರಾಣ, ಧನ, ಮಾನ ಇವುಗಳು ಮನುಷ್ಯನನ್ನು ಗುಲಾಮನನ್ನಾಗಿ ಮಾಡುವುದಿಲ್ಲ, ಆದರೆ ಇವುಗಳ ಮೇಲಿನ ವಿಪರೀತ ಆಸಕ್ತಿ ಮಾತ್ರ ಅವನನ್ನು ಗುಲಾಮನನ್ನಾಗಿ ಮಾಡುತ್ತದೆ."

ಪ್ರಾಣ ಪ್ರಪಂಚಗಳನ್ನು ತೊರೆಯಿರೆಂದು ಇಲ್ಲಿ ಉಪದೇಶವಿಲ್ಲ; ಅಹಂಕಾರ ವನ್ನು ತೊರೆಯಬೇಕು ಎನ್ನುವುದು ಈ ಉಪದೇಶ. ಮಾನವನ ಜೀವನ ಈ ನಶ್ವರ ಪ್ರಪಂಚದಲ್ಲಿ "ಪದ್ಮಪತ್ರದಮೇಲಿನ ಹಿಮದ ಹನಿಯಂತೆ," ಅದರ ಮೇಲಿದ್ದರೂ ಅದಕ್ಕೆ ಅಂಟಿಕೊಂಡಿಲ್ಲ. ಲೋಭ ಮೋಹಗಳಿಂದ ವಿಮುಕ್ತ ರಾದಾಗ ಆನಂದ ಕರುಣೆಗಳಿಂದ ನಮ್ಮ ಆತ್ಮ ತುಂಬುತ್ತದೆ. ಶಮಾನ್ವಿತ ವಾದಮನಸ್ಸು ಅನುಕಂಪ ಮಯವಾದ ಹೃದಯದ ಮುನ್ಸೂಚನೆ. ಇದ ರಿಂದ ಸುಕರ್ಮ ಹೊರಹೊಮ್ಮುತ್ತದೆ. **ಯೋಗಃ ಕರ್ಮಸು ಕೌಶಲಂ,** ಕುಶಲ ಕರ್ಮವೇ ಯೋಗ.

ಯೋಗಿ ಅಕರ್ಮಿಯಾಗಿರಬೇಕೆಂಬ ವಿಧಿಯಿಲ್ಲ. ಯೋಗಿಯು ಲೋಕ ದಲ್ಲಿ ವಿಚಾರ ಪೂರ್ವಕವಾಗಿ ಕರ್ಮ ಮಾಡುತ್ತಾನೆ. ತನ್ನ ಅಂತರಾತ್ಮನಿಗೆ ಸಾಕ್ಷಿ ನೀಡುವಂತೆ ಕರ್ಮಮಾಡುತ್ತಾನೆ. ತನ್ನ ಪಾಲಿಗೆ ಬಂದ ಕರ್ತವ್ಯ ವನ್ನು ತನ್ನ ಆತ್ಮನಿಷ್ಠೆಗೆ ಚ್ಯುತಿಬರದ ರೀತಿಯಲ್ಲಿ ನೆರವೇರಿಸುತ್ತಾನೆ. ಸಂತ ಥೆರೀಸಾಳ ಈ ಮಾತುಗಳು ಒಂದು ದೊಡ್ಡ ತತ್ವವನ್ನು ಸಾರುತ್ತವೆ. "ಪರಮಾತ್ಮ ಸಾಯುಜ್ಯದ ಪರ್ಯವಸಾನ ಫಲವಿದು, ಕೈಂಕರ್ಯ."

## ೭. ದೇವಾಂಶ ಸಂಭೂತರು

ಗೌತಮ ಬುದ್ಧ ಏಸುಕ್ರಿಸ್ತನಂಥವರನ್ನು ದೇವಾಂಶಸಂಭೂತರು ಎನ್ನುತ್ತೇವೆ. ಅವರ ಹೆಸರಿನಲ್ಲೇ ಎರಡು ತತ್ವಗಳ ಸೂಚನೆ ಇವೆ. ಒಂದು ಅವರ ಮಾನುಷದೇಹ ಮತ್ತೊಂದು ಅದನ್ನು ತನ್ನ ಅಭಿವ್ಯಕ್ತಿಗಾಗಿ ಅವಲಂಬಿಸಿರುವ ಪರತತ್ವ. ಜರತುಷ್ಟ್ರನ ಮೂಲನಾಮ 'ಸ್ಪಿತಮ' ಎಂದು ಅವನು ತಾಳಿದ ಬಿರುದು ಜರತುಷ್ಟ್ರ. ಬುದ್ಧ ಅನ್ನುವ ಮಾತು ಕ್ರೈಸ್ತ ಅನ್ನುವ ಮಾತಿನಂತೆ ವಿಶ್ವತತ್ತ್ವವು ಮಾನವ ಆಕಾರವನ್ನು ತಾಳಿದ ಅರ್ಥ ವನ್ನು ಸೂಚಿಸುತ್ತದೆ. ಇದು ಜೀವಾತ್ಮ ಪರಮಾತ್ಮರ ಸಂಗಮದ ವಿಚಾರ ವನ್ನು ಮುಂದಿಡುತ್ತದೆ. ನಿರಪೇಕ್ಷವಾದರೂ ಸಾಪೇಕ್ಷವಾದುದರಲ್ಲಿ ಪ್ರತಿ ಬಿಂಬಿಸುತ್ತದೆ. ಈ ರೀತಿಯ ಒಂದೊಂದು ಆವಿಷ್ಕಾರವೂ ಅದರ ವೈಶಿಷ್ಟ್ಯವನ್ನು ಹೊಂದಿದೆ. ವಿರೊಧಾಭಾಸವನ್ನು ಮನ್ನಿಸುವುದಾದರೆ ಇದನ್ನು ಸಾಪೇಕ್ಷ ನಿರಪೇಕ್ಷತೆ ಎಂದು ವರ್ಣಿಸಬಹುದು. ಇಂಥದೊಂದು

ಘಟನೆ ಮಾತ್ರ ವಾಸ್ತವವಾದುದೆಂಬುದನ್ನು ಒಪ್ಪಿಕೊಳ್ಳಬೇಕು. ಮಾನವ ಪರಿಪೂರ್ಣನಾದರೆ ಈಶ್ವರತ್ವವನ್ನು ಪಡೆಯುತ್ತಾನೆ. ಮುಕ್ತಿ ಪಡೆಯುತ್ತಾನೆ, ನಿರುಪಾಧಿಕ ಆನಂದವನ್ನು ಹೊಂದುತ್ತಾನೆ, ನಿತ್ಯತ್ವಗಳಿಸುತ್ತಾನೆ, ಸತ್ಯಸ್ಯಸತ್ಯನಾಗುತ್ತಾನೆ, ಕೊನೆಗೆ ಬ್ರಹ್ಮನೇ ಆಗುತ್ತಾನೆ. ಇಲ್ಲಿ ವ್ಯಷ್ಟಿಸಮಷ್ಟಿಗಳ ಸಂಘರ್ಷ ಕೊನೆಗಾಣುತ್ತದೆ.

ಈ ದೇವಾಂಶ ಸಂಭೂತರು ಉತ್ಕೃಷ್ಟ ಮಾನವತೆಯ ಮುನ್ಸೂಚಕರು. ಗೌತಮನಿಗೆ ಅಥವಾ ಏಸುವಿಗೆ ಯಾವದು ಸಾಧ್ಯವಾಯಿತೋ ಅದು ಎಲ್ಲ ಮನುಷ್ಯರಿಗೂ ಸಾಧ್ಯ. ಮಾನವನ ಸ್ವಭಾವದ ಪರಿಪಾಕವನ್ನು ಅವರಲ್ಲಿ ಕಾಣುತ್ತೇವೆ. ಅವರು ನಮ್ಮ ಹಿರಿಯಣ್ಣಂದಿರು. ಮಾನವಕುಲಕ್ಕೆ ಏನೇನು ಸಾಧ್ಯವೆಂಬುದನ್ನು ಅವರು ತೋರಿಸುತ್ತಾರೆ. ಈಶ್ವರ ಭಾವನೆ ಹೊಂದಿದ್ದ ಮಾತ್ರಕ್ಕೆ ಗೌತಮ ಅಥವಾ ಏಸು ಎಲ್ಲ ಮಾನವರಿಗಿಂತಲೂ ಪ್ರತ್ಯೇಕವಾಗುವುದಿಲ್ಲ. ಏಸುವನ್ನು ನಿಷ್ಪಾಪನೆಂದು ನಾವು ಭಾವಿಸಿದರೂ ಸಹ, ಅವನ ಮಾನವತ್ವಕ್ಕೆ ಚ್ಯುತಿ ಇಲ್ಲ. ಪಾಪಗಂಧ ಮನುಷ್ಯ ಸ್ವಭಾವದ ತಿರುಳಲ್ಲಿಲ್ಲ. ಅದು ಅದರ ವಿಕಾರ ಮಾತ್ರ. ನಮ್ಮಂತಹ ಸಾಮಾನ್ಯ ಮನುಷ್ಯರಲ್ಲಿ, ಈಶ್ವರ ಪ್ರತಿಪತ್ತಿ ಮುಸುಕಾಗಿದೆ, ಮಂಕಾಗಿದೆ, ಪೂರ್ತಿಯಾಗಿ ವಿಕಸಿಸಿಲ್ಲ. ಏಸುವಿನಲ್ಲಿ ಇದರ ಪೂರ್ಣ ತೇಜಸ್ಸನ್ನು ಕಾಣುತ್ತೇವೆ; ಅಲ್ಲಿ ಭಗವಂತನ ಪ್ರತಿಬಿಂಬ ಅತಿ ಪ್ರಕಾಶದಿಂದ ಕೂಡಿದೆ.

ಈ ಲೋಕದಲ್ಲಿ ಹುಟ್ಟುವ ಪ್ರತಿ ಮಾನವನಲ್ಲಿಯೂ ಈ ಅಂತಜ್ಯೋತಿ ಇದೆ. ಈಶ್ವರನ ಅಂಶ ಅಥವಾ ಬೀಜ ಅವನಲ್ಲಿ ಹುದುಗಿದೆ. ಇದು ಅವನ ಇಡೀ ಜೀವನವನ್ನು ಪರಿವರ್ತನೆ ಮಾಡಬಲ್ಲದು. ನಮ್ಮ ಅಂತರಾತ್ಮನಲ್ಲಿ ಪೂರ್ಣ ಶ್ರದ್ಧೆಯಿದ್ದರೆ ನಾವೆಲ್ಲರೂ ಸಂಸಾರದಿಂದ ಬಿಡುಗಡೆ ಹೊಂದಲು ಸಾಧ್ಯ. ನಮ್ಮ ಕುರುಡುತನವಾಗಲಿ ಅಥವಾ ಕುತ್ಸಿತತನವಾಗಲಿ ಈಶ್ವರನಲ್ಲಿ ಸಾಯುಜ್ಯ ಪಡೆಯುವ ಅವಕಾಶವನ್ನು ಸಂಪೂರ್ಣವಾಗಿ ನಾಶಮಾಡಲಾರದು.

ದೇವರಿಂದ ಪರಿವರ್ತನೆಗೊಂಡ ಸಂತ, ದೇವರ ಒಂದು ಅಂಶದಂತೆಯೇ ನಡೆದುಕೊಳ್ಳುತ್ತಾನೆ. ಹೇಗೆ ಏಸುಕ್ರಿಸ್ತ ದೇವರೊಡನೆ ಸಾರೂಪ್ಯ ಪಡೆದನೋ ಹಾಗೆಯೇ ಈಶ್ವರ ಸಾನ್ನಿಧ್ಯವನ್ನು ಬಯಸಿ ಅದನು

ಪಡೆದವರೆಲ್ಲರೂ ಅದೇ ಅನುಗ್ರಹಕ್ಕೆ ಪಾತ್ರರಾಗುತ್ತಾರೆ. ಕಬ್ಬಿಣವೂ ಚಿಂಕಿಯಾಗಬಲ್ಲುದು.

ಎಷ್ಟೇ ಮಹಿಮಾನ್ವಿತನಾದರೂ, ಯಾವ ವ್ಯಕ್ತಿಯೂ ಭಗವಂತನ ಪೂರ್ಣಾವತಾರವೆಂದು ಭಾವಿಸಲಾಗದು. ಭಗವದಂಶ ಒಬ್ಬೊಬ್ಬರಲ್ಲಿ ಒಂದೊಂದು ರೀತಿಯಲ್ಲಿ ಅಭಿವ್ಯಕ್ತವಾಗುತ್ತದೆ. ಈ ದೃಷ್ಟಿಯಿಂದ ಪ್ರತಿ ವ್ಯಕ್ತಿಯೂ ಭಗವಂತನ ಒಂದು ವಿಶಿಷ್ಟ ರೂಪವೆಂದು ಭಾವಿಸಬಹುದು. ಅವನ ವಿಶಿಷ್ಟ ಅಗತ್ಯವೊಂದನ್ನು ಪೂರೈಸುತ್ತಾನೆ. ಬದುಕು ಅನಂತ, ಅಪಾರ. ಜೀವನದ ವಿವಿಧ ಮೌಲ್ಯಗಳಲ್ಲಿ ಅದು ವ್ಯಕ್ತಗೊಳ್ಳುತ್ತದೆ. ಪ್ರತಿ ವ್ಯಕ್ತಿಯೂ ತನ್ನದೆ ಆದ ಸ್ವರೂಪ ಪಡೆದಿರುತ್ತಾನೆ. ಇವನು ಮತ್ತೊಬ್ಬ ವ್ಯಕ್ತಿಯ ನಕಲಲ್ಲ. ಒಂದು ಜಾತಿಯ ಉದಾಹರಣೆ ಅಲ್ಲ. ಪ್ರತಿಯೊಬ್ಬನೂ ತನ್ನದೇ ದಾರಿಯಲ್ಲಿ ನಡೆಯಬೇಕು. ವ್ಯಕ್ತಿ ಉನ್ನತಿಯ ಮಾರ್ಗದಲ್ಲಿ ಮುಂದುವರಿದಷ್ಟೂ ಅವನಲ್ಲಿ ವಿಕಸಿಸುವ ಅಂಶಗಳು ವಿಕಾಸ ವಿಶಿಷ್ಟವಾದದ್ದಾಗುವುದು. ಯಾರೋ ಒಬ್ಬ, ಇಬ್ಬ ವ್ಯಕ್ತಿಗಳಲ್ಲಿ ಮಾತ್ರ ಪರಮಾತ್ಮನ ಆವಿಷ್ಕಾರ ಸಂಪೂರ್ಣವಾಗಿದೆ ಎಂದು ಹೇಳಲು ಸಾಧ್ಯವಿಲ್ಲ.

ಪ್ರಾಚ್ಯ ಪ್ರತೀಚ್ಯ ದೇಶಗಳಲ್ಲಿ ದೇವಾಂಶಸಂಭೂತರನ್ನು ದೇವರ ಅವತಾರವೆಂದು ಭಾವಿಸುವ ವಾಡಿಕೆ ಇದೆ. ರಾಮ, ಬುದ್ಧ, ಏಸು ಇವರನ್ನು ಅವತಾರಗಳೆಂದು ಕರೆದಿದೆ. ರಾಮನ ಕಥೆಯನ್ನು ತೆಗೆದುಕೊಳ್ಳೋಣ. ವಾಲ್ಮೀಕಿ ರಾಮನನ್ನು ಮನುಷ್ಯನೆಂದೂ, ದಶರಥನ ಮಗನೆಂದೂ, ತಪಸ್ಸಿನಿಂದ ದಿವ್ಯತೆಯನ್ನು ಪಡೆದವನೆಂದೂ, ಅವನ ಬಾಯಲ್ಲೇ ಹೇಳಿಸಿದ್ದಾನೆ. ಆದರೆ ಸಂಪ್ರದಾಯ ಮಾತ್ರ ಅವನನ್ನು ವಿಷ್ಣುವಿನ ಅವತಾರವೆಂದು ಭಾವಿಸಿದೆ. ರಾವಣನ ಮಾತುಲನಾದ ಮಾಲ್ಯವಾನ್ ರಾಮನನ್ನು ವಿಷ್ಣುವಿನ ಅವತಾರವೆಂದು ತಾನು ನಂಬಿರುವುದಾಗಿ ತಿಳಿಸುತ್ತಾನೆ. ಅದೇ ಕಾಂಡದ ೭೨ ನೆ ಅಧ್ಯಾಯದಲ್ಲಿ ರಾವಣನೂ ಸಹ ರಾಮನನ್ನು ಪರಮ ಪುರುಷನೆಂದು ಭಾವಿಸುತ್ತಾನೆ. ರಾಮ ಪರಬ್ರಹ್ಮ ಸ್ವರೂಪವೆಂದು ಭಾವಿಸಿ ಋಷಿಗಳು ನಲಿಯುತ್ತಾರೆ. ಮಾನವ ಕುಲಕ್ಕೆ ಅವತಾರ ಅರ್ಥವಾಗಬೇಕಾದರೆ ಸಜಾತೀಯ ಭಾವನೆಯಿಂದ ಮಾತ್ರ ಅದು ಸಾಧ್ಯ. ಅವನೂ ನಮ್ಮಂತೆಯೇ ಸುಖದುಃಖಗಳನ್ನು ಅನುಭವಿಸುವವನು ಎಂಬ ಭಾವನೆ

ಅವಶ್ಯಕ. ಅವನು ದೇವರೇ ಆಗಿದ್ದರೆ ಅವನನ್ನು ಅನುಕರಣ ಮಾಡುವುದು ಅಸಾಧ್ಯ. ನಮ್ಮಂತೆಯೇ ಅವನು ಮನುಷ್ಯನಾಗಬೇಕು, ಜೀವನದೊಡನೆ ಹೋರಾಡಬೇಕು, ಗೆಲವು ಸೋಲುಗಳನ್ನು ಅನುಭವಿಸಬೇಕು.

ಹಿಂದೂ ಸಂಪ್ರದಾಯಕ್ಕೆ ಅನುಸಾರವಾಗಿ ಎಂದೆಂದು ಧರ್ಮಗ್ಲಾನಿ ಯಾಗುವುದೋ ಅಂದು ಧರ್ಮಸಂಸ್ಥಾಪನೆಗಾಗಿ ಒಬ್ಬ ಮಹಾನುಭಾವ ಭಗವದನುಗ್ರಹರೂಪವಾಗಿ ಭೂಮಿಯಮೇಲೆ ಹುಟ್ಟುತ್ತಾನೆ. ಭೂಮಾತೆ ಅಹುರಮಜ್ದನಿಗೆ ಮೊರೆ ಇಟ್ಟುದುದರ ಫಲವಾಗಿ ಜರತುಷ್ಟ್ರ ಹುಟ್ಟಿದನೆಂದು ಜರತುಷ್ಟ್ರ ಪಂಥದ "ಗಾಥ" ಪವಿತ್ರಗ್ರಂಥಗಳು ಮೊಳಗುತ್ತವೆ. ಈಬೊನೈಟರೂ ಪ್ರಾಯಶಃ ನಾಜರೀನರೂ ಕೂಡ ಏಸುವನ್ನು ಪ್ರವಾದಿಗಳಲ್ಲಿ ಶ್ರೇಷ್ಠತಮನೆಂದು ಗೌರವಿಸಿದರು. ಆದರೆ ಅವನ ಪೂರ್ವಜನ್ಮಸ್ಥಿತಿಯನ್ನಾಗಲಿ, ದೈವಿಕ ಪರಿಪೂರ್ಣತೆಯನ್ನಾಗಲಿ ಒಪ್ಪಲಿಲ್ಲ. ಐತಿಹಾಸಿಕ ಏಸು ಕ್ರೈಸ್ತ ಸಿದ್ಧಾಂತದಲ್ಲಿ "ಮಹಿಮಾನ್ವಿತ ಕ್ರಿಸ್ತ"ನಾಗಿ ಪರಿವರ್ತನೆಗೊಂಡಂತೆ ಗೌತಮ ಬುದ್ಧನೂ ಮಾನವಾತೀತನಾಗಿ ಪರಿವರ್ತನೆಗೊಂಡನು. ಮೋಕ್ಷ ಪ್ರದಾತನಾದ ಸ್ವಾಮಿಯು ರಕ್ಷಕನೂ ಆದನು. ಕ್ರೈಸ್ತಸಿದ್ಧಾಂತದಲ್ಲಿ ತತ್ವತ್ರಯ (Trinity) ಬೆಳೆದಂತೆ ಬೌದ್ಧಧರ್ಮದಲ್ಲಿ ಬುದ್ಧನ ತ್ರಿಕಾಯ ಸಿದ್ಧಾಂತ ಬೆಳೆಯಿತು. **ಧರ್ಮಕಾಯ** ಸೂಕ್ಷ್ಮಾತ್ ಸೂಕ್ಷ್ಮತರವಾದ ಬುದ್ಧನ ಕಾಯ. ಚಿದ್ಘನದಿಂದ ಕೂಡಿದ್ದು, ಕರುಣೆಯ ಅತಿ ಸೂಕ್ಷ್ಮರೂಪ. ಪ್ರತಿ ಮಾನವನೂ ಇದನ್ನು ತನ್ನಲ್ಲೇ ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. **ಸಂಭೋಗಕಾಯ**, ಆನಂದಮಯಕಾಯ, ಪ್ರಜ್ಞೆಯ ಮೂರ್ತಸ್ವರೂಪ. ಸತ್ಯಸನಾತನ ಬುದ್ಧನಲ್ಲಿ ವ್ಯಕ್ತಿಗತವಾದ ನಿರಪೇಕ್ಷತತ್ವ. **ನಿರ್ವಾಣ ಕಾಯ** ಪರಿವರ್ತನೆಗೆ ಒಳಗಾದ ಕಾಯ, ಸಶರೀರಬುದ್ಧನ, ಐತಿಹಾಸಿಕಗೌತಮ ತಾಳಿದ ಕಾಯ, ಇತರ ದೇಹಗಳಂತೆ ರಚಿಸಿದ ದೇಹ. ಈ ಮೂರೂ ಪ್ರತ್ಯೇಕ ಬುದ್ಧರಲ್ಲ. ಒಂದೇ ಬುದ್ಧನ ಮೂರು ಅಂಶಗಳು.

ಭಗವದ್ಗೀತೆ ಬೋಧಿಸುವಂತೆಯೇ ಮಹಾಯಾನ ಬೌದ್ಧಧರ್ಮವು ಬುದ್ಧರು ಮಾನವರ ಉದ್ಧಾರಕ್ಕಾಗಿ ಪದೇ ಪದೇ ಭೂಮಿಯಮೇಲೆ ಅವತರಿಸುವರೆಂದು ಬೋಧಿಸುತ್ತದೆ. "ಬೋಧಿಸತ್ತ್ವ ಪ್ರಪಂಚದಲ್ಲಿ ಎಲ್ಲರಿಗೂ

ಮುಕ್ತಿ ತರುವ ಸಲುವಾಗಿ, ಆನಂದ ತರುವ ಸಲುವಾಗಿ, ಎಲ್ಲರ ಮೇಲಿನ ಅನುಕಂಪದಿಂದ, ಅವರಿಗೆ ಅನುಗ್ರಹರೂಪವಾಗಿ, ಮಾನವರಿಗೂ ದೇವತೆಗಳಿಗೂ ಸಂತೋಷ ನೀಡುವ ಸಲುವಾಗಿ ಅವತಾರವೆತ್ತುತ್ತಾನೆ."

೮

# ಮತಗಳಲ್ಲಿ ಪರಸ್ಪರ ಮೈತ್ರಿ

## ೧. ಮತಧರ್ಮಗಳ ಅಂತರಂಗ ಐಕ್ಯ

ಜ್ಞಾನಿಗಳು, ಅವರ ಮತಧರ್ಮಯಾವುದೇ ಇರಲಿ, ಬಹು ದೇವತೆಗಳ ಕಲ್ಪನೆಯಿಂದ ಏಕ ದೇವತೆಯ ಉಪಾಸನೆಯ ಕಡೆಗೆ ಒಲವು ಬೆಳಸಿಕೊಳ್ಳಬೇಕೆಂದು ಬೋಧಿಸುತ್ತಾರೆ. ಈ ಏಕದೇವ ನಮ್ಮ ಕಲ್ಪನೆಗಳನ್ನೂ ಭಾವನೆಗಳನ್ನೂ ಮೀರಿದವನು. ಅವನನ್ನು ತಿಳಿಯುವುದು ಕಷ್ಟ. ಆದರೆ ಅನುಭವ ವೇದ್ಯನಾದವನು. ಎಲ್ಲ ಜೀವಿಗಳ ಸಾರ ಸರ್ವಸ್ವ, ಎಲ್ಲದರ ಪರಾಕಾಷ್ಠೆ. ಮತಧರ್ಮಗಳು ಎಷ್ಟು ವೈವಿಧ್ಯದಿಂದ ಕೂಡಿದ್ದರೂ ಇದೇ ಅವುಗಳ ಏಕಮಾತ್ರ ಗುರಿ.

ನಮ್ಮ ನಮ್ಮ ಮತಧರ್ಮಗಳ ಆಧಾರಭೂತ ಸತ್ಯವನ್ನೇ ನಾವು ಅರಿಯದಿರುವುದರಿಂದ ಅವುಗಳ ಮಧ್ಯೆ ಕಾಣುವ ವ್ಯತ್ಯಾಸಗಳು ಬೃಹದಾಕಾರವನ್ನು ತಾಳುತ್ತವೆ. ಎಲ್ಲ ಮತಾನುಭವದಲ್ಲಿಯೂ ಒಂದು ಸಾಮಾನ್ಯ ಅಂಶವಿದೆ, ಅದರ ಶ್ರದ್ಧೆಗೆ ಮತ್ತು ಉಪಾಸನೆಗೆ ಆಧಾರವಾದ ಸಾಮಾನ್ಯ ತಳಹದಿ ಇದೆ. ಇದರ ಮೇಲೆ ಕಟ್ಟಿದ ಕಟ್ಟಡಗಳು ವಿವಿಧ ರೂಪದವಾಗಿರಬಹುದು. ದೇವರ ಯೋಜನೆಯಂತೂ ಒಂದೇ ರೀತಿಯದು. ನಿಜವಾಗಿ ಶ್ರದ್ಧಾನಿಷ್ಠರಾದ ಜನರು ಇದಕ್ಕೆ ಹೇರಳವಾದ ಸಾಕ್ಷಿ ಒದಗಿಸುತ್ತಾರೆ. ಮಾನವರಿಗೆ ಪ್ರಾಪ್ತವಾಗುವ ಈಶ್ವರಾನುಗ್ರಹ ವಿವಿಧರೀತಿಯದು. ಸಂತ ಪಾಲ್ ಇದನ್ನು ಕುರಿತು ದೇವರು ಅವನ ವರಗಳನ್ನು ಪ್ರತಿ "ಮನುಷ್ಯನಿಗೂ ಪ್ರತ್ಯೇಕವಾಗಿ ಅವರವರಿಗೆ ಬೇಕಾದಂತೆ" ಹಂಚುತ್ತಾನೆ ಎನ್ನುತ್ತಾನೆ. ಪ್ರತಿ ಮಾನವನ ಅನುಭವವೂ ಅವನದೇ ರೀತಿಯದು. ತನ್ನ ದೇವರನ್ನು ತನ್ನ ರೀತಿಯಲ್ಲೇ ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ತನ್ನ ವೈಶಿಷ್ಟ್ಯವಾದ ಕಾಣಿಕೆಯನ್ನು ಎಲ್ಲರ ಬೊಕ್ಕಸಕ್ಕೆ ತುಂಬಬೇಕು. ಅನುಭವದ ವೈವಿಧ್ಯ ಜಗತ್ತಿನ ಅಧ್ಯಾತ್ಮ ಸಂಪತ್ತಿಗೆ ಮೆರಗು ಕೊಡುತ್ತದೆ.

ಭಿನ್ನಮತಗಳ ಸಾಮರಸ್ಯವನ್ನು ಬಾಹ್ಯ ಭೂಮಿಕೆಯಮೇಲೆ ಸ್ಥಾಪಿ

ಸುವುದು ಅಸಾಧ್ಯ. ಯಾವೊಂದು ವಿಧವಾದ ಬಾಹ್ಯ ರೂಪಕ್ಕೂ ಆಕಾರಕ್ಕೂ ಚ್ಯುತಿ ತರದ ರೀತಿಯಲ್ಲಿ ಅಂತರಂಗದಲ್ಲಿ ಇದರ ಸಿದ್ಧಿಯಾಗಬೇಕು. ಹಿಂದೂ ಜ್ಞಾನಿಯು ಯಾವ ಮತಧರ್ಮವನ್ನೂ ಅಲ್ಲಗೆಳೆಯುವುದಿಲ್ಲ. ಅವೆಲ್ಲವೂ ನಮ್ಮನ್ನು ದೇವರಕಡೆಗೆ ಒಯ್ಯಲಿಕ್ಕೂ ಸಾಧನಗಳೆಂದೂ ಅದರ ಕಡೆಗೆ ಹರಿಯುವ ವಿವಿಧ ಜಲಾಶಯಗಳೆಂದೂ ನಂಬುತ್ತಾರೆ. ಯಾವುದೋ ಒಂದು ಮತಧರ್ಮದ ಮೂಲಕವಾಗಿ ಮಾತ್ರ ಮುಕ್ತಿ ಸಾಧ್ಯವೆಂಬುದರಲ್ಲಿ ಅವನಿಗೆ ನಂಬಿಕೆ ಇಲ್ಲ. ಯಾರು ಎಲ್ಲೇ ಇರಲಿ, ಏನಾದರೂ ಆಗಿರಲಿ, ಎಲ್ಲಿಯೇ ಹುಟ್ಟಿರಲಿ, ಯಾವ ಮತಧರ್ಮದಲ್ಲಿಯಾಗಲಿ ಬೆಳೆದಿರಲಿ ನಿರ್ಮಲವಾದ ಅಂತಃಕರಣದಿಂದ ಗಾಢವಾದ ಪ್ರೇಮದಿಂದ ಪರಮಾತ್ಮನನ್ನು ಅರಸಿದರೆ ಅವನಿಗೆ ಪ್ರತ್ಯಕ್ಷನಾಗಲು ದೇವರು ನಿರಾಕರಿಸುವುದಿಲ್ಲ.

ಸತ್ಯದಲ್ಲಿ ನಾಟಿದವರಿಗೆ ನಾವು ದೇವರ ವಿಷಯದಲ್ಲಿ ಮಾಡಿಕೊಳ್ಳುವ ಕಲ್ಪನೆಗಳು ಮತ್ತು ಅವನನ್ನು ಸೇರಲು ಅವಲಂಬಿಸುವ ಮಾರ್ಗಗಳು ಎಷ್ಟು ಸಾಪೇಕ್ಷವಾದವುಗಳೆಂದೂ ಅಸಮರ್ಪಕವೆಂದೂ ಚೆನ್ನಾಗಿ ಮಂದಟ್ಟಾಗಿರುತ್ತದೆ. ಹಿಂದೂ ಪವಿತ್ರಗ್ರಂಥಗಳು ಶಬ್ದಾತೀತವಾದ ಬ್ರಹ್ಮನನ್ನು ಅರಿಯಲು ಶಬ್ದಗಳನ್ನು ಉಪಯೋಗಿಸುತ್ತೇವೆಂದು ಅವಾಂಗ್ಮನಸಗೋಚರವಾದ ಪರತತ್ವವನ್ನು ಮುಟ್ಟಲು ಈ ಮಾರ್ಗದಲ್ಲಿ ಹೋಗುತ್ತಿರುವನೆಂದು ಹೇಳುತ್ತವೆ. ಹಿಂದೂಸಂಪ್ರದಾಯದ ಪ್ರಕಾರ, ಮತಾನುಭವನ್ನು ಒಂದೇ ರೀತಿಯ ಒಂದೇ ರೂಪದಲ್ಲಿ ಅಳವಡಿಸಲು ಸಾಧ್ಯವಿಲ್ಲ. ಹಿಂದೂ ಧರ್ಮದ ಪ್ರಕಾರ ಸತ್ಯವು ಅನುಭವವೇದ್ಯವಾದ ಸಾಕ್ಷಾತ್ಕಾರ, ಮಾನವನ ಮೂಲಕವಾಗಿ ಅವನ ಇಂದ್ರಿಯಗಳು ಬುದ್ಧಿ ಇವುಗಳ ಮೂಲಕ ಪ್ರತಿಬಿಂಬಿಸುವಾಗ ಸತ್ಯದ ಜ್ಯೋತಿ ಸ್ವಲ್ಪ ಮಸುಕಾಗುತ್ತದೆ. ವ್ಯವಹಾರ ಪ್ರಪಂಚದಲ್ಲಿ ಅನ್ವಯಿಸುವ ಕಲ್ಪನೆಗಳನ್ನು ಪಾರಮಾರ್ಥಿಕ ಪ್ರಪಂಚಕ್ಕೆ ಅನ್ವಯಿಸತೊಡಗಿದಾಗ ನಮ್ಮ ವಿಚಾರ ಅನೇಕ ವಿರೋಧಾಭಾಸಗಳಿಗೆ ತುತ್ತಾಗುತ್ತದೆ. ಬುದ್ಧಿಗೆ ಗೋಚರವಾದದ್ದು ಮಾತ್ರ ಸತ್ಯ ಎನ್ನುವುದು ಬುದ್ಧಿವಾದದ ಅಪಭ್ರಂಶ. ಸೃಷ್ಟಿಯ ರಹಸ್ಯಮಯ ಅರ್ಥ ಇಂಥ ಬುದ್ಧಿಗೆ ಗೋಚರವಾಗುವುದಿಲ್ಲ. ಮೂಲಭೂತವಾದ ಆಧ್ಯಾತ್ಮಾನುಭವ, ಮತ್ತು ಅದರ ಆವಿಷ್ಕಾರ ಬರಿಯ ಬುದ್ಧಿಗೆ ಗೋಚರವಲ್ಲ. ಈ ಅನುಭವವನ್ನು ಪಡೆದವರು ನಾಸ್ತಿಕ

ವಾದಕ್ಕೆ ದೂರವಾಗಿರುತ್ತಾರೆ. ಹಾಗೆಯೇ ದೇವರ ವಿಷಯದಲ್ಲಿ ವಿಚಿತ್ರ ಅಸಮಂಜಸಕಲ್ಪನೆಗಳಿಂದ ಕೂಡಿದ ಆಸ್ತಿಕ ವಾದಕ್ಕೂ ದೂರವಾಗಿರುತ್ತಾರೆ.

ಈ ಬ್ರಹ್ಮಪ್ರಾಪ್ತಿ ವೇದದ ಋಷಿಗಳಿಗೆ ಮಾತ್ರ ಮೀಸಲಾಗಿದೆಯೇ ಅನ್ನುವ ಪ್ರಶ್ನೆಯನ್ನು ಎತ್ತಿ ವಾತ್ಸ್ಯಾಯನರು ನ್ಯಾಯ ಸೂತ್ರ ಭಾಷ್ಯದಲ್ಲಿ ಇದು ಆರ್ಯರಿಗೂ ಅನಾರ್ಯರಿಗೂ ಲಬ್ಧವಾದದ್ದು – **ಋಷಿ–ಆರ್ಯ–ಮ್ಲೇಚ್ಛಾನಾಮ್ ಸಮಾನಮ್ ಲಕ್ಷಣಮ್** ಎಂದು ಹೇಳಿರುತ್ತಾರೆ. ತಮ್ಮ ಸ್ವಂತ ಭಾಷೆ, ಸ್ವಂತ ಸಂಸ್ಕೃತಿ, ಸ್ವಂತ ಸಂಪ್ರದಾಯಗಳಲ್ಲಿ ಮಾತ್ರ ಬದ್ಧರಾಗಲು ಅವರ ಮನಸ್ಸು ಒಡಂಬಡಲಿಲ್ಲ. ಜಗತ್ತಿನ ಇತರ ಪ್ರದೇಶಗಳಲ್ಲಿ ನಡೆಯುವ ಐತಿಹಾಸಿಕ ಘಟನೆಗಳಿಂದಲೂ ನಾವು ಪ್ರಭಾವಿತರಾಗಬೇಕು. 'ಯಾವದು ಸತ್ಯವೋ, ಅದನ್ನು ಯಾರೇ ಹೇಳಿರಲಿ, ಅದು ಪವಿತ್ರಾತ್ಮನಿಂದ ಬಂದದ್ದು' ಎಂದು ಸಂತ ಏಂಬ್ರೋಸ್ ಹೇಳುತ್ತಾನೆ. ನಾವು ನಿಜವಾದ ಆಧ್ಯಾತ್ಮ ಜೀವನವನ್ನು ಅನುಷ್ಠಾನಕ್ಕೆ ತರಲು ಬಯಸಿದವರಿಗೆ ಪೂರ್ಣ ಅವಕಾಶಗಳನ್ನು ಕಲ್ಪಿಸಿಕೊಡಬೇಕು.

ಹಿಂದೂ ಮುಸ್ಲಿಮ್ ಮೈತ್ರಿಯನ್ನು ಬೆಳೆಸಿದ ಹದಿನೈದನೇ ಶತಮಾನದ ಸಂತ ಕಬೀರ್ ಹೀಗೆಂದು ಹೇಳಿದ್ದಾನೆ. "ಹಿಂದೂಗಳ ದೇವರು ವಾರಾಣಸಿಯಲ್ಲಿ ವಾಸಿಸುತ್ತಾನೆ; ಮುಸ್ಲಿಮರ ದೇವರು ಮಕ್ಕಾದಲ್ಲಿ. ಆದರೆ ಈ ಜಗತ್ತನ್ನು ಮಾಡಿದ ದೇವರು ಮಾನವನ ಕೈಗಳಿಂದ ನಿರ್ಮಿತವಾದ ನಗರಗಳಲ್ಲಿ ವಾಸಿಸುವುದಿಲ್ಲ. ಹಿಂದುಗಳಿಗೂ ಮುಸ್ಲಿಮರಿಗೂ ಇರುವ ತಂದೆ ಒಬ್ಬನೇ, ಈ ವಿಶ್ವಕ್ಕೆಲ್ಲಾ ಇರುವ ದೇವರು ಒಬ್ಬನೆ."

ಹೊಸ ವಿಚಾರಕ್ಕೆ ಎಡೆಕೊಡದ ಭಾವನೆಗಳಿಗೂ ವಾದ ಸಿದ್ಧಾಂತಗಳಿಗೂ ಬುದ್ಧ ಎದುರಾಗಿ ನಿಂತ. ತನ್ನ ಅನುಯಾಯಿಗಳು ಚರ್ಚೆಯಲ್ಲಿ ತೊಡಗದೆ ಪ್ರಬುದ್ಧರಾಗುವ ಮಾರ್ಗದಲ್ಲಿ ತಡೆಯಬೇಕೆಂದು ಒತ್ತಾಯಪಡಿಸಿದನು. ಒಂದು ಸಿದ್ಧಾಂತವನ್ನು ಅವಲಂಬಿಸಿದಮೇಲೆ ಅವನ್ನು ವಾದದಿಂದ ಹೇಗಾದರೂ ಸಮರ್ಥಿಸಬೇಕೆಂಬ ಆಸೆ ಹುಟ್ಟುತ್ತದೆ. ಇದು ಅನ್ಯ ಸಿದ್ಧಾಂತಗಳೊಡನೆ ವಾದಕ್ಕೆ ಇಳಿಯುವಂತೆ ಮಾಡುತ್ತದೆ. ಗರ್ವದಲ್ಲಿ ಪರ್ಯಾವಸಾನವಾಗುತ್ತದೆ. ನಿಜವಾದ ವಿಜ್ಞಾನಿ ಈ ವಾದ ವಿವಾದಗಳ ಗೋಜಿಗೆ ಹೋಗುವುದಿಲ್ಲ. ತನ್ನದು ಎನ್ನುವ ಒಂದು ಸಿದ್ಧಾಂತವಿಲ್ಲದಿರುವು

ದರಿಂದ, ತನ್ನ ಅಭಿಮಾನಾಸ್ಪದವಾದದ್ದು ಯಾವುದೂ ಇಲ್ಲದಿರುವುದರಿಂದ ಸಿದ್ಧಾಂತಗಳಿಂದ ದೂರ ಸರಿಯುತ್ತಾನೆ. ಮಹಾಯಾನ ಬೌದ್ಧಧರ್ಮವು ಪರಮಪ್ರಜ್ಞೆಯ ಗುರಿಯನ್ನು ಯಾವ ಉಪಾಯದಿಂದಲಾದರೂ ಮುಟ್ಟ ಬಹುದೆಂದು ಭೋದಿಸುತ್ತದೆ. ನಮ್ಮ ಆಧ್ಯಾತ್ಮಿಕ ಕುರುಡುತನವನ್ನು ಹೋಗಲಾಡಿಸಿ ನಮಗೆ ಜ್ಞಾನವನ್ನು ತಂದುಕೊಡುವ ಯಾವ ಉಪಾಯ ವಾದರೂ ನಮಗೆ ಉಪಾದೇಯ. ಗುರು ತನ್ನ ಉಪದೇಶದಲ್ಲಿ ಮುಂದಿಡುವ ಮಾತುಗಳು ಮತ್ತು ಭಾವನೆಗಳು " ಒಂದು ನದಿಯನ್ನು ದಾಟಲು ಉಪ ಯೋಗಿಸುವ ದೋಣಿಯನ್ನು ಹೋಲುತ್ತವೆ." ಒಂದು ಚರ್ಚಿನಲ್ಲಿ ಹುಟ್ಟು ವುದೇನೋ ಒಳ್ಳೆಯದು. ಆದರೆ ಅದರಲ್ಲಿಯೇ ಸಾಯಬಾರದು ಎಂದು ಒಂದು ಹೇಳಿಕೆ ಇದೆ. ಪುರಾಣಪದ್ಧತಿಯನ್ನು ಅನುಸರಿಸಿ, ಎಲ್ಲರಂತೆ ನಾವಿರಲು ಪ್ರಯತ್ನಪಡುವುದೇನೋ ಬಹು ಸುಲಭ. ಇದರಿಂದ ವ್ಯಕ್ತಿ ಸಾವಿರದಲ್ಲಿ ಒಬ್ಬ ಆಗುತ್ತಾನೆ, ವ್ಯಕ್ತಿಗತ ನಿಷ್ಠೆಗೌರವಗಳಿಲ್ಲದವನಾಗು ತ್ತಾನೆ.

ಇಸ್ಲಾಮ್ " ದೀನ್-ಉಲ್-ಹಕ್ " ಅಂದರೆ ಸತ್ಯದ ಮತವೆಂದು ಕರೆಯಲ್ಪಟ್ಟಿದೆ. ಅಂದರೆ ಸತ್ಯ ತನಗೆ ಮಾತ್ರ ಮೀಸಲಾಗಿದೆ ಎಂದು ಇದರ ಅರ್ಥವಲ್ಲ. ಕುರಾನಿನಲ್ಲಿ ಹೇಳಿದೆ: "ನಾವು ದೇವರಲ್ಲಿ ನಂಬುತ್ತೇವೆ ಮತ್ತು ಅವನು ನಮಗೆ ಮತ್ತು ಏಬ್ರಹಾಂ, ಇಷ್ಮೇಲ್, ಇಸಾಕ್, ಜೇಕಬ್ ಮೋಸಸ್, ಜೀಸಸ್ ಮೊದಲಾದ ಇತರ ಪ್ರವಾದಿಗಳಿಗೆ ನೀಡಿರುವ ಸತ್ಯ ವಚನದಲ್ಲಿ ನಂಬುತ್ತೇವೆ. ನಾವು ಪರರಲ್ಲಿ ಯಾವ ಭೇದವನ್ನೂ ಎಣಿಸುವು ದಿಲ್ಲ." ಕುರಾನ್ ಮತ್ತೆ ಹೇಳುತ್ತದೆ : " ಎಚ್ಚರ ಕೊಡುವ ಪ್ರವಾದಿಯನ್ನು ಪಡೆಯದ ಜನ ಯಾರೂ ಇಲ್ಲ." ತನ್ನ ಅನುಯಾಯಿಗಳು ಎಲ್ಲ ಧರ್ಮಗಳ ಪ್ರವಾದಿಗಳನ್ನು ಅಂಗೀಕರಿಸಬೇಕೆಂದು ಇಸ್ಲಾಂ ಹೇಳುತ್ತದೆ. ಅನ್ಯಥಾ ಭಾವಿಸಿದರೆ, ಪರಮಾತ್ಮನು ಪಕ್ಷಪಾತಯುತನೆಂದೂ ಸಹಸ್ರಾರು ವರ್ಷಗಳು ಕೋಟ್ಯಂತರ ಜೀವಿಗಳನ್ನು ತನ್ನ ಕೃಪೆಗೆ ಪಾತ್ರರಾಗದಂತೆ ಅಜ್ಞಾನದ ಅಂಧಕಾರದಲ್ಲಿ ನೂಕಿದ್ದನೆಂದು ಭಾವಿಸಬೇಕಾಗುವುದು. ಇದು ಈಶ್ವರನ ಸ್ವರೂಪಕ್ಕೆ ವಿರೋಧ. ಮತಧರ್ಮಗಳು ವಿವಿಧವಾಗಿ ಇದ್ದ ಮಾತ್ರಕ್ಕೆ ಮತ ಧರ್ಮದ ಸತ್ಯಕ್ಕೇ ಚ್ಯುತಿ ಉಂಟಾಗುವುದಿಲ್ಲ. ಮತಧರ್ಮದ ವಿವಿಧ ರೂಪ

ಗಳು ಐತಿಹಾಸಿಕ ಮತ್ತು ಭೌಗೋಳಿಕ ಸನ್ನಿವೇಶಗಳನ್ನು ಆಶ್ರಯಿಸಿವೆ. ಇವುಗಳ ಸಹಾಯದಿಂದ ಮತಧರ್ಮ ಬೆಳೆದಿದೆ.

ಮನುಷ್ಯರು ಕಲ್ಪಿಸಿಕೊಂಡಿರುವ ಈಶ್ವರನ ಕಲ್ಪನೆಗಳೇ ಈಶ್ವರನಲ್ಲ. ನಮ್ಮ ಬುದ್ಧಿಗೆ ನಿಲುಕುವ ಸಲುವಾಗಿ ಅದಕ್ಕೆ ನಾಮರೂಪಗಳನ್ನು ಕೊಡುತ್ತೇವೆ. ಇವು ಐತಿಹಾಸಿಕ ಮತ್ತು ಅಸಮರ್ಪಕ. ಕ್ಯಾಂಟ್ ವಾದ ಮಾಡುವಂತೆ ಮತಪ್ರಕ್ರಿಯೆಗಳು ನಮ್ಮ ಬುದ್ಧಿಗೆ ಒಂದು ಎಲ್ಲೆ, ತಾತ್ಕಾಲಿಕವಾಗಿ ಮಾರ್ಗದರ್ಶನ ಮಾಡಬಲ್ಲವು, ಅವಾಂಗ್ಮನಸಗೋಚರವಾದ ಪರಬ್ರಹ್ಮನ ಸಂಕೇತ ಮಾತ್ರ. ಅದರ ನಿಜಸ್ವರೂಪವನ್ನು ಅರಿಯೆವು. ಅದರೂ ಅದರ ತಾತ್ಪರ್ಯವೇನೆಂದು ಕಂಡುಕೊಳ್ಳುವೆವು.

ನಿಜವಾದ ಧರ್ಮನಿಷ್ಠ ನಮ್ರತೆಯಿಂದ ಕೂಡಿರುತ್ತಾನೆ. ಅವನಲ್ಲಿ ಶ್ರದ್ಧೆಯಿದೆ, ಆಗ್ರಹ ಆವೇಶಗಳಿಲ್ಲ. ತನ್ನ ಅನುಭವಕ್ಕೆ ವೇದ್ಯವಾದ ಪರತತ್ವಕ್ಕೆ ಶರಣುಹೋಗುತ್ತಾನೆ. ಆದರೆ ಆದರ ವಿಶದವಾದ ವಿವರಣೆ ಎಷ್ಟು ಅಸಮರ್ಪಕವೆಂದು ಅರಿಯುತ್ತಾನೆ. ಮತಾಂಧನಿಗೆ ಈ ಅಸಮರ್ಪಕತೆಯ ಭಾವ ಹುಟ್ಟುವುದಿಲ್ಲ. ಶ್ರದ್ಧೆ ನಮ್ರನ ಆಸರೆ, ಆದರೆ ಮತಾವೇಶ ಅಹಂಕಾರ ಪ್ರಚೋದಕವಾದದ್ದು. ನಮಗೆ ತೋರಿದ ಬೆಳಕು ನಮಗೆ ತೃಪ್ತಿಕೊಟ್ಟಿದೆ ಎಂದು ಹೇಳಲು ಅಡ್ಡಿಯಿಲ್ಲ, ಆದರೆ ಇತರರಿಗ್ಯಾರಿಗೂ ಈ ಬೆಳಕು ಕಂಡಿಲ್ಲ, ಮುಂದೆ ಕಾಣುವ ಹಾಗೂ ಇಲ್ಲ ಎಂದು ಹೇಳುವುದು ” ಸರಿಯಲ್ಲ. ನಿಜವಾದ ಶ್ರದ್ಧೆ ಹೀಗೆಂದೂ ಹೇಳುವುದಿಲ್ಲ. ತಾನು ಕಂಡ ದೇವರೇ ನಿಜವಾದ ದೇವರೆಂದೂ, ತನಗೆ ಹಿಂದೆ, ತನಗೆ ಮುಂದೆ ಈ ದೇವರ ಸಾಕ್ಷಾತ್ಕಾರ ಇನ್ಯಾರಿಗೂ ಆಗುವುದಿಲ್ಲವೆಂದು ಭಾವಿಸುವುದು ನಿಜವಾದ ಶ್ರದ್ಧೆಯ ಲಕ್ಷಣವಲ್ಲ, ಮತದ ದುರಾಗ್ರಹದ ಲಕ್ಷಣ.

## ೨. ಕ್ರೈಸ್ತ ಸಮಾಗಮ

“ಅವರನ್ನು ಒಳಗೆ ಬರುವಂತೆ ಒತ್ತಾಯಗೊಳಿಸಿ” ಅನ್ನುವುದು ಧರ್ಮದಲ್ಲಾಗಲಿ ರಾಜಕೀಯದಲ್ಲಾಗಲಿ ಅರ್ಥವಿಲ್ಲದ ಮಾತು. ಮತಧರ್ಮ ಒಂದು ಮನೋಭಾವ, ಜೀವನಕ್ಕೆ ಒಂದು ಅರ್ಥ ಮತ್ತು ಐಕ್ಯತೆಯನ್ನು ನೀಡುತ್ತದೆ. ಇದು ಎಲ್ಲರೂ ಅಂಗೀಕರಿಸಲೇಬೇಕಾದ ಸಿದ್ಧಾಂತಗಳಲ್ಲ. ಸಿದ್ಧಾಂತಗಳು,ನಿತ್ಯನೈಮಿತ್ತಿಕ ಕರ್ಮಗಳು, ವಿವಿಧ ಮತಧರ್ಮಗಳು ಅವೇ

ಉದ್ದೇಶಗಳಲ್ಲ. ಅವು ಮಾನವ ಕುಲದ ಹಿತಕ್ಕಾಗಿ ದೇವರ ಸಂಕಲ್ಪವನ್ನು ನೆರವೇರಿಸುವ ಉಪಾಯಗಳು ಮಾತ್ರ. ಅದು ಯಾವೊಂದು ವರ್ಗದ, ಸಂಸ್ಕೃತಿಯ, ಬಣದ, ರಾಷ್ಟ್ರದ ಸ್ವತ್ತಾಗಬಾರದು. ಸಾವಿರಾರು ವರ್ಷಗಳಿಂದ ನೆಲೆಸಿದ ಸಂಪ್ರದಾಯಗಳನ್ನು ಬಿಟ್ಟುಬಿಡಿರೆಂದು ಜನರಿಗೆ ಬೋಧಿಸುವುದು ವಿವೇಕವಲ್ಲ. ಏಕೆಂದರೆ ಇದು ಅನೇಕ ತಲೆಮಾರಿನ ಜನಕ್ಕೆ ಪಾರಮಾರ್ಥಿಕ ಸಮಾಧಾನವನ್ನು ತಂದು ಕೊಟ್ಟಿದೆ, ಹಾಗೂ ಜ್ಞಾನಿಗಳೂ ಪವಿತ್ರಾತ್ಮರೂ ಆದ ಸಂತರನ್ನು ನಮಗೆ ಒದಗಿಸಿದೆ. ಒಂದು ಗಿಡ ತನ್ನ ನೆಲದಲ್ಲಿ ಬೇರು ಬಿಟ್ಟಿರುವವರೆಗೂ ಬದುಕಿರುತ್ತದೆ. ಇದು ಭಾವನೆಗಳಿಗೂ ಅನ್ವಯಿಸುತ್ತದೆ.

ಹಿಂದಿನ ಕಾಲಕ್ಕಿಂತಲೂ ಇಂದಿನ ಕಾಲದಲ್ಲಿ, ಮತಧರ್ಮಗಳು ಪರಸ್ಪರ ಅನೇಕ ಪಾಠಗಳನ್ನು ಕಲಿಯಲು ಅವಕಾಶವಿದೆ. ಆದರೆ ಈ ಸನ್ನಿಕರ್ಷದಿಂದ ಪರಿವರ್ತಿತವಾದ ಮತಧರ್ಮ ಮಾನವರ ಆಧ್ಯಾತ್ಮಿಕ ಐಕಮತ್ಯಕ್ಕೆ ತಳಹದಿಯಾಗುವುದು ಸಂದೇಹಾಸ್ಪದ. ಆದರೆ ಪ್ರಧಾನ ಮತಧರ್ಮಗಳು ಅವುಗಳ ಆಧ್ಯಾತ್ಮ ಆಧಾರಗಳ ಸಲುವಾಗಿ, ಸರ್ವಸಾಮಾನ್ಯ ಮಾನವ ನೀತಿಯ ಸಲುವಾಗಿ ಪರಸ್ಪರ ಹೊಂದಿಕೊಳ್ಳಲು ಸಾಧ್ಯವಾಗಿದೆ. ಇರುವ ಅನೇಕ ಧರ್ಮಗಳಿಂದ ನಮಗೆ ಬೇಕಾದ ಸ್ಫೂರ್ತಿಯನ್ನು ಪಡೆಯಬಲ್ಲೆವು. ನಮಗೆ ಬೇಕಾದದ್ದು ಹೊಸಧರ್ಮವಲ್ಲ, ಹಳೆಯ ಧರ್ಮಗಳಲ್ಲಿಯ ಮನೋವೈಶಾಲ್ಯ. ಮುಂದಿನ ಮತಧರ್ಮ ಯಾವುದೋ ಒಂದು ಮತಧರ್ಮವನ್ನು ಎಲ್ಲರೂ ಅಂಗೀಕರಿಸುವಂತೆ ಮಾಡುವುದಲ್ಲ, ಅಥವಾ ಮತಧರ್ಮಗಳಲ್ಲಿ ಪರಸ್ಪರ ಘರ್ಷಣೆಯಲ್ಲ, ಅಥವಾ ಮತಗಳ ಕಲಬೆರಕೆ ಅಲ್ಲ. ನಮಗೆ ಬೇಕಾದದ್ದು ಮತಧರ್ಮಗಳ ವೈವಿಧ್ಯವನ್ನು ಸ್ವಾತಂತ್ರ್ಯವನ್ನು ಉಳಿಸಿಕೊಂಡು, ಅವುಗಳಿಗೆಲ್ಲಾ ಯಾವದು ತಿರುಳೋ ಅದರ ಅಂಗೀಕಾರ.

ನಮ್ಮ ಐಕಮತ್ಯ ಹೃದಯಗಳ ಆತ್ಮಗಳ ಅಂತರಂಗಿಕ ಐಕಮತ್ಯವಾಗಬೇಕು. ಭಗವಂತನನ್ನು ಆರಾಧಿಸುವ ಮಾರ್ಗಗಳಲ್ಲಿ ನಾವು ಪರಸ್ಪರ ಭಿನ್ನರಾಗಿರಬಹುದು. ಆದರೆ ಈ ಮಾರ್ಗಗಳ ಅಂತರಾಳವನ್ನು ಹೊಕ್ಕು ನೋಡಿದಾಗ ಅಧ್ಯಾತ್ಮ ಜೀವನದ ಸಮಗ್ರ ಸತ್ಯದರ್ಶನ ಪ್ರಾಪ್ತವಾಗುತ್ತದೆ.

ಬೇರೆ ಬೇರೆ ಕಾಲದ ಬೇರೆ ಬೇರೆ ದೇಶದ ಜನ ಈ ಭಾವನೆಗೆ ಸಮ್ಮತಿ ನೀಡಿದ್ದಾರೆ. ಪರಸ್ಪರ ಕಾಲದೇಶಗಳ ಅಂತರ ಈ ಆಧ್ಯಾತ್ಮಿಕ ಸಂಪತ್ತಿನಲ್ಲಿ ಪಾಲುಗೊಳ್ಳಲು ನಮಗೆ ಅಡ್ಡಿಯಾಗಿಲ್ಲ. ನಮ್ಮಿಂದ ಮರೆಯಾಗಿದ್ದ ಸಂಪತ್ತನ್ನು ಮತ್ತೊಮ್ಮೆ ಗಳಿಸಲು ಅದು ನಮಗೆ ಸಹಾಯವಾಗಿದೆ.

ನಮ್ಮದಲ್ಲದ ಇತರ ಧರ್ಮಗಳಲ್ಲಿ ನಾವು ತೋರಿಸುವ ಔದಾಸೀನ್ಯ, ಅಸಡ್ಡೆಗಳಿಗೆ ನಮ್ಮ ಅಜ್ಞಾನ, ಅವುಗಳ ಅರಿವು ಇಲ್ಲದಿರುವುದೇ ಕಾರಣ. ಪೂಜ್ಯಭಾವದಿಂದ ಅವುಗಳನ್ನು ಅಧ್ಯಯನ ಮಾಡಿದರೆ ಆಗ ಅವುಗಳ ಸಾಮರಸ್ಯ ನಮಗೆ ಮಂದಟ್ಟಾಗುವುದು. ಉದಾಸೀನರಾಗಿ ಉಳಿದಿರುವುದರಿಂದ, ಒಂದು ದೊಡ್ಡ ಸದವಕಾಶವನ್ನು ಕಳೆದುಕೊಂಡಿದ್ದೇವೆ. ಪರಸ್ಪರ ಕೂಡಿ ಕೆಲಸ ಮಾಡುವುದರಿಂದ ಮತಗಳು ಮಾನವ ಕುಲದ ಮೈತ್ರೀಭಾವದ ದರ್ಶನವನ್ನು ಪಡೆಯಲು ಸಹಾಯ ಮಾಡುತ್ತವೆ. ಡಾ. ಆಲ್ಬರ್ಟ್ ಷ್ವೈಟ್ಜರ್ ಹೇಳುತ್ತಾನೆ: "ಪ್ರಾಚ್ಯ ಪ್ರತೀಚ್ಯ ತತ್ವದರ್ಶನಗಳು ತಮ್ಮವೇ ಸತ್ಯದರ್ಶನವೆಂದೂ ಇತರ ದರ್ಶನಗಳು ಅಸತ್ಯದರ್ಶನಗಳೆಂದೂ ಸ್ಥಾಪಿಸಲು ಪ್ರಯತ್ನ ಮಾಡಬಾರದು. ಈ ದರ್ಶನಗಳೆಲ್ಲ ಎಲ್ಲ ಮಾನವ ಕೋಟಿಗೂ ಸಮಾನವಾಗಿ ಅನ್ವಯಿಸುವ ವಿಚಾರಧಾರೆಯಕಡೆಗೆ ಧಾವಿಸಬೇಕು." ಅಧ್ಯಾತ್ಮ ಜೀವನದ ಅನ್ವೇಷಣೆಯಲ್ಲಿ ತೊಡಗಿರುವ ಸಹಚರಿಗಳಾದ ಮಿತ್ರರು ಇವು. ಶಾಂತಿ, ನ್ಯಾಯ, ಸ್ವಾತಂತ್ರ್ಯಗಳ ಕಡೆಗೆ ಈ ಧರ್ಮಗಳೆಲ್ಲವೂ ಪರಸ್ಪರ ಸಹಕಾರದಿಂದ ನಮ್ಮನ್ನು ಒಯ್ಯಬೇಕು. ನಮ್ಮ ಸಹೋದರರ ಮೇಲಿನಪ್ರೀತಿ ಎಲ್ಲ ನೆರೆಹೊರೆಯರ ಪ್ರೀತಿಯಾಗಿ ಪರಿವರ್ತನಗೊಳ್ಳಬೇಕು. ಆತ್ಮನ ಧರ್ಮ ಅಧ್ಯಾತ್ಮ ಸಹಜೀವನಕ್ಕೆ ಪ್ರಾಣಕೊಡಬೇಕು. ಪ್ರತಿ ಧರ್ಮವೂ, ಒಂದರಿಂದ ಮತ್ತೊಂದು ಎರವು ತೆಗೆದುಕೊಳ್ಳದೆಯೇ ಒಂದೇ ರೀತಿಯ ಪ್ರತಿಕ್ರಿಯೆವುಳ್ಳದ್ದಾಗಿದೆ.

ಭಾರತವನ್ನು ನಾವು ಲೌಕಿಕ ರಾಜ್ಯ (Secular State) ಎಂದು ಕರೆದಾಗ ಅದೃಶ್ಯ ಶಕ್ತಿಯೊಂದನ್ನು ನಿರಾಕರಿಸುವೆವೆಂದಾಗಲಿ, ಅಥವಾ ಜೀವನದಲ್ಲಿ ಮತಕ್ಕೆ ಸ್ಥಾನವಿಲ್ಲವೆಂತಾಗಲಿ ಅಥವಾ ನಾಸ್ತಿಕವಾದವನ್ನು ಎತ್ತಿ ಹಿಡಿದಿರುವೆವೆಂದಾಗಲೀ ಅರ್ಥವಲ್ಲ. ಅಥವಾ ರಾಷ್ಟ್ರ ಸಂಸ್ಥೆಯೇ ಭಗವಂತನ ಪ್ರಭುತ್ವವನ್ನು ಆರೋಪಿಸಿಕೊಂಡಿದೆ ಎಂದೂ ಅರ್ಥವಲ್ಲ.

ಈ ಲೌಕಿಕತೆಯನ್ನೇ ನಾವು ಒಂದು ಧರ್ಮವನ್ನಾಗಿ ಪರಿಗಣಿಸುವುವೆಂದು ಅರ್ಥವಲ್ಲ. ಭಗವಂತನಲ್ಲಿ ನಂಬಿಕೆ ಭಾರತ ಸಂಪ್ರದಾಯ ಸಂಸ್ಕೃತಿಯ ಆಧಾರ. ಅದರೂ ರಾಜ್ಯಸಂಸ್ಥೆ ಮಾತ್ರ ಯಾವೊಂದು ಧರ್ಮದವರಿಂದ ನಿಯಂತ್ರಿತವಾಗಿಯೂ ಇಲ್ಲ. ಯಾವುದೊಂದು ಮತಧರ್ಮಕ್ಕೂ ಇತರ ಧರ್ಮಗಳಿಗೆ ಸಲ್ಲದ ಮನ್ನಣೆ ಕೊಡುವುದಿಲ್ಲ. ರಾಷ್ಟ್ರೀಯವಾಗಿಯಾಗಲಿ ಅಂತರರಾಷ್ಟ್ರೀಯವಾಗಿಯಾಗಲಿ ಯಾವೊಂದು ಮತಧರ್ಮಕ್ಕೂ ವಿಶೇಷ ವಾದ ಹಕ್ಕುಗಳನ್ನು ಕೊಟ್ಟಿಲ್ಲ. ಹೀಗೆ ಮಾಡಿದರೆ ಪ್ರಜಾಪ್ರಭುತ್ವದ ಮೂಲ ಭೂತ ತತ್ವಗಳಿಗೆ ಧಕ್ಕೆ ತಗಲುತ್ತದೆ. ಇದು ಸರ್ಕಾರಕ್ಕೂ ಒಳ್ಳೆಯದಲ್ಲ. ಧರ್ಮಕ್ಕೂ ಒಳ್ಳೆಯದಲ್ಲ. ನಮ್ಮ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಜೀವನದಲ್ಲಿ ಈ ಧಾರ್ಮಿಕ ನಿಷ್ಪಕ್ಷಪಾತ, ವಿವೇಕ, ಸಹಿಷ್ಣುತೆಗಳಿಗೆ ವಿಶೇಷ ಮಹತ್ವವಿದೆ. ಭವಿಷ್ಯದ ದೃಷ್ಟಿಯಿಂದ ಇದರ ಪಾತ್ರ ಪವಿತ್ರವಾದದ್ದು. ಯಾವ ನಾಗರೀಕರೂ ಸಹ ಇಂದು ಇತರ ನಾಗರೀಕರಿಗೆ ಒದಗದ ಹಕ್ಕು ಗಳನ್ನೂ ಅನುಕೂಲಗಳನ್ನೂ ತಮಗಾಗಿ ಬಳಸಿಕೊಳ್ಳಲು ಸಾಧ್ಯವಿಲ್ಲ. ಯಾರೂ ಮತಧರ್ಮದ ಸಲುವಾಗಿ ಯಾವ ತೊಂದರೆಗೂ ಒಳಗಾಗದಂತೆ ನೋಡಿಕೊಳ್ಳಬೇಕು. ಅವರವರ ಧರ್ಮ ಏನೇಇರಲಿ ಸಾಮೂಹಿಕ ಜೀವನದಲ್ಲಿ ಒಟ್ಟಿಗೆ ಕಲೆತು ಬಾಳುವ ಸ್ವಾತಂತ್ರ್ಯ ಎಲ್ಲರಿಗೂ ಇರಬೇಕು. ಮತ, ಧರ್ಮ, ಮತ್ತು ರಾಜ್ಯ ಒಂದರಲ್ಲೊಂದು ಬೆರೆಯದಂತೆ ನೋಡಿ ಕೊಳ್ಳಬೇಕು ಅನ್ನುವ ತತ್ವದ ಅರ್ಥ ಇದು. ಭಾರತರಾಜ್ಯದ ಧಾರ್ಮಿಕ ನಿಷ್ಪಕ್ಷಪಾತ ತತ್ವವನ್ನು ಚಾರ್ವಾಕ ಮತವೆಂದಾಗಲಿ ಅಥವಾ ನಾಸ್ತಿಕವಾದ ವೆಂದಾಗಲಿ ತಪ್ಪಾಗಿ ಅರ್ಥ ಮಾಡಿಕೊಳ್ಳಬಾರದು. ಇಲ್ಲಿ ವಿವರಿಸಿರುವ ಈ ಲೌಕಿಕತೆ (Secularism) ಭಾರತದ ಪುರಾತನ ಧರ್ಮ ಸಂಸ್ಕೃತಿಗೆ ಅನುಗುಣವಾದದ್ದಾಗಿದೆ. ಎಲ್ಲ ಮತಧರ್ಮಗಳ ಅನುಯಾಯಿಗಳಲ್ಲಿ ಅವರ ವರ ವೈಯಕ್ತಿಕಮತನಿಷ್ಠೆಯನ್ನು ಸಮೂಹಿಕ ಜೀವನಕ್ಕಾಗಿ ಅನುಗೊಳಿಸಿದೆ ಪರಸ್ಪರ ಮೈತ್ರಿಯನ್ನು ಬೆಳೆಸಲು ಪ್ರಯತ್ನಿಸಿದೆ. ಈ ವೀರ್ಯವತ್ತಾದ ಮೈತ್ರಿ ಅನೇಕತೆಯಲ್ಲಿ ಏಕತೆಯನ್ನು ಕಾಣುವ ಜೀವಂತ ಸಿದ್ಧಾಂತದ ಮೇಲೆ ನಿಂತಿದೆ. ಇದರಲ್ಲಿ ಕ್ರಿಯಾತ್ಮಕ ಆಂತರಿಕ ಚೇತನವಿದೆ.

ವಿವಿಧ ಧರ್ಮಗಳ ಅಧ್ಯಯನದಿಂದ ಅವುಗಳಲ್ಲೆಲ್ಲಾ ತಾತ್ವಿಕ ಆಳ

ಇದೆ, ಆಧ್ಯಾತ್ಮಿಕ ತೀವ್ರತೆ ಇದೆ, ವಿಚಾರದ ಕ್ರಾಂತಿ ಇದೆ, ಮಾನವೀಯ ಅನುತಾಪ ಇದೆ ಎಂದು ಅರ್ಥವಾಗುತ್ತದೆ. ಪವಿತ್ರತೆ, ಪರಿಶುದ್ಧತೆ, ನಿಷ್ಠೆ, ಕರುಣೆ, ಪ್ರಪಂಚದ ಯಾವೊಂದು ಧರ್ಮದ ಪ್ರತ್ಯೇಕ ಸ್ವತ್ತಲ್ಲ.

ಇಂದು ಪ್ರತಿಯೊಂದು ಮತದಲ್ಲೂ ತಮ್ಮ ಸಂಕುಚಿತ ದೃಷ್ಟಿಯನ್ನು ಬಿಟ್ಟು ಉದಾರ ಹೃದಯರು, ಸಂಖ್ಯೆಯಲ್ಲಿ ಕಡಮೆಯಾದರೂ, ಪ್ರಭಾವಿತ ರಾಗಿ ಉಳಿದಿದ್ದಾರೆ. ಇವರು ಎಲ್ಲ ಧರ್ಮನಿಷ್ಠರ ಪರಸ್ಪರ ಮೈತ್ರಿಯಲ್ಲಿ ಶ್ರದ್ಧೆಯುಳ್ಳವರು. ಇದನ್ನು ಯಾರ ಮೇಲೂ ಒತ್ತಾಯದಿಂದ ಹೊರಿಸಲು ಹೋಗುವುದಿಲ್ಲ. ಆದರೆ ಎಲ್ಲರಲ್ಲಿಯೂ ಈ ಭಾವವನ್ನು ಮೂಡಿಸುತ್ತಾರೆ. ಅದೇನೆಂದರೆ ನಾವೆಲ್ಲರೂ ಸತ್ಯಾನ್ವೇಷಕರು, ಯಾತ್ರಿಕರು; ನಮ್ಮೆಲ್ಲರ ಜೀವನದ ನೈತಿಕ ಮತ್ತು ಆಧ್ಯಾತ್ಮಿಕ ಗುರಿ ಒಂದೇ.

ಯಾರು ಸಾಕ್ಷಾತ್ಕಾರದ ಅನುಭವಕ್ಕಾಗಿ ಹಾತೊರೆಯುತ್ತಿರುವರೋ ಅವರು ಅಧ್ಯಾತ್ಮ ಮತಧರ್ಮದ ಮುನ್ಸೂಚಕರು. ಇದು ಮತೀಯ ಸಂಸ್ಥೆ ಗಳನ್ನು ಮೀರಿದ್ದು, ಬರಿಯ ಪಾಂಡಿತ್ಯದ ವೈಖರಿಗಳನ್ನು ದಾಟಿದ್ದು. ಇದು ನಿರೀಕ್ಷೆ ಮಾಡುವುದು ಪ್ರೇಮದ ಆಧಾರದ ಮೇಲೆ ನಿರ್ಮಿತವಾದ ಇಹ ಲೋಕದ ಸಾಮ್ರಾಜ್ಯ. ಅಲ್ಲಲ್ಲಿ ಜೀವಂತವಾಗಿರುವ ಈ ಮನೋಭಾವ ಭವಿಷ್ಯದ ಶುಭಸೂಚನೆ.

# ಉಪಸಂಹಾರ

ನಮ್ಮ ಯುಗ ಮತಧರ್ಮವನ್ನು ಮತ್ತು ಅದರ ಅರ್ಥವನ್ನು ಅರಿಯಲು ಅಶಕ್ತವಾಗಿದ್ದರೂ, ಅದಕ್ಕೆ ಮತಧರ್ಮ ಮಾತ್ರವೇ ಕೊಡಬಲ್ಲ ಬಯಕೆ ಇದೆ. ಈಶ್ವರನ ಅಸ್ತಿತ್ವ, ಜೀವಾತ್ಮನ ಸ್ವಾತಂತ್ರ್ಯ, ಜೀವಾತ್ಮನು ಪರಮಾತ್ಮನ ವ್ಯಕ್ತಸ್ವರೂಪ ಎಂಬ ನಂಬಿಕೆ, ಮಾನವಕುಲದ ಐಕ್ಯತೆಯೇ ಇತಿಹಾಸವೆಲ್ಲದರ ಗುರಿ ಅನ್ನುವ ಭಾವನೆ ಪ್ರಧಾನಮತಧರ್ಮಗಳ ಆಧಾರವಾಗಿವೆ. ಅಂತರಂಗದ ಧರ್ಮ ಈ ಮೂಲಭೂತತತ್ವಗಳನ್ನು ಒತ್ತಿಹೇಳುತ್ತದೆ. ಸಿದ್ಧಾಂತ ರಾದ್ಧಾಂತಗಳನ್ನು, ಕರ್ಮಕಲಾಪಗಳನ್ನು ಬಹು ಅಸಮರ್ಪಕವಾದ ಉಪಾಯಗಳು ಸಂಕೇತಗಳು ಮಾತ್ರ ಎಂದು ಭಾವಿಸುತ್ತದೆ. ಮತಧರ್ಮಗಳ ಮುಖಂಡರು ತಮ್ಮ ಮತಧರ್ಮಗಳನ್ನು ತಮ್ಮ ಜಡತೆಯನ್ನು ಬಿಟ್ಟು ಸಚೇತನವನ್ನಾಗಿ ಮಾಡಬೇಕಾಗಿದೆ. ಈ ಪುಟಗಳಲ್ಲಿ ವಿವರಿಸಲ್ಪಟ್ಟಿರುವ ಧರ್ಮವನ್ನು ಕಾಲದೇಶ ಅಬಾಧಿತವಾದ **ಸನಾತನಧರ್ಮ** ಎಂದು ಕರೆಯಬಹುದು. ಇದು ಯಾವೊಂದು ಮತಧರ್ಮದೊಡನೆ ಸಂಕುಚಿತಗೊಂಡಿದ್ದಿಲ್ಲ. ಎಲ್ಲ ಗುಂಪುಗಳನ್ನು ಮತ್ತು ಪಂಥಗಳನ್ನು ಮೀರಿದ್ದು, ಆದರೂ ಎಲ್ಲ ಗುಂಪುಗಳಿಗೆ ಪಂಥಗಳಿಗೆ ಜೀವಕಳೆ ಕೊಡುವಂಥದು.

ನಾವು ಅವಲಂಬಿಸಿರುವ ಮತಧರ್ಮವನ್ನು ಅಂತರಂಗದ ಧರ್ಮಕ್ಕೆ ಹೊಂದಿಕೊಳ್ಳುವಂತೆ ಪರಿವರ್ತನಗೊಳಿಸುವುದು ಸಾಧ್ಯ. ಪ್ರತಿ ಧರ್ಮದಲ್ಲಿಯೂ ಈ ರೀತಿಯ ಪರಿವರ್ತನೆಗೆ ಅವಕಾಶವಿದೆ ಎಂದು ಧೃಢವಾಗಿ ನಂಬುತ್ತೇನೆ.

ಹಿಂದೂ ಧರ್ಮವಾಗಲಿ, ಕ್ರೈಸ್ತ ಧರ್ಮವಾಗಲಿ ಪರಮಾರ್ಥದ ಕ್ರಮವರಿತ ಆವಿಷ್ಕಾರವೆಂದು ಭಾವಿಸಬೇಕು. ಕೊನೆಗೆ ಇವುಗಳನ್ನೂ ಮೀರಿದ ಹೆಚ್ಚು ವ್ಯಾಪಕವಾದ ಅಂತರಂಗಧರ್ಮದಲ್ಲಿ ಇವುಗಳ ಸಂಗಮ ಆಗಬೇಕು.

ನಾವಿರುವ ಯುಗ ಅಶಾಂತಿಯ, ಅಪಾಯದ ಆದರೂ ಸದವಕಾಶದ ಯುಗ. ನಮ್ಮ ಅಸಮರ್ಪಕತೆಗಳು ನಮಗೆ ಚೆನ್ನಾಗಿ ವೇದ್ಯವಾಗಿದೆ. ನಮ್ಮ ಒಳಗಿನ ಕಣ್ಣು ತೆರೆದು ನಮ್ಮ ಗುರಿ ಏನೆಂಬುದು ನಮಗೆ ಸ್ಪಷ್ಟವಾಗುವುದಾದರೆ ಈ ಅಸಮರ್ಪಕತೆಗಳನ್ನು ನಿರ್ಮೂಲ ಮಾಡಿ ಸಾಹಸದಿಂದ ನಾವು ಕಂಡ ಕನಸು ನನಸಾಗುವಂತೆ ಮಾಡಲು ಸಾಧ್ಯ.

**RECOVERY OF FAITH**

*Kannada Translation by* Prof. M. Yamu[illegible]charya

# ಹೊಸ ಮಾರ್ಗ

ಈ ಸ್ಫೂರ್ತಿದಾಯಕ ಗ್ರಂಥದಲ್ಲಿ, ಆಧುನಿಕ ತತ್ವಜ್ಞಾನಿಗಳಲ್ಲಿ ಅತ್ಯಂತ ಪ್ರತಿಭಾವಂತರೂ, ರಾಜನೀತಿನಿಪುಣರೂ ಆದ ಡಾ|| ರಾಧಾಕೃಷ್ಣನ್, ಇಂದು ಮಾನವನಿಗೆ ಅವಶ್ಯಕವಾಗಿರುವ ಹೊಸ ಧರ್ಮಶ್ರದ್ಧೆಯ ಅವಶ್ಯಕತೆಯನ್ನು ಕುರಿತ ಪ್ರಶ್ನೆಗೆ ಉತ್ತರವಿತ್ತಿದ್ದಾರೆ. ಪ್ರಾಚೀನಕಾಲದಲ್ಲೂ ಅರ್ವಾಚೀನ ಕಾಲದಲ್ಲೂ ಮಾನವರು ಅನುಸರಿಸಿದ ತಾತ್ವಿಕ ನಂಬಿಕೆಗಳನ್ನೂ ಉಪನಿಷತ್ತುಗಳಿಂದ ಹಿಡಿದು ವಿಲಿಯಂ ಪೆನ್ನನ ತತ್ವಗಳವರಿಗೆ ಮತ್ತು ಇತ್ತೀಚಿನ ಸಾರ್ತ್ರೆ, ಬರ್ಗ್‌ಸನ್ ಮುಂತಾದವರ ವಿಚಾರಗಳನ್ನೂ ವಿಮರ್ಶೆಮಾಡುತ್ತಾ ಅವರು ವಿವಿಧ ಮತಧರ್ಮ ವಿಚಾರಗಳನ್ನು ಸರಳಸುಂದರ ಶೈಲಿಯಲ್ಲಿ ನಿರೂಪಿಸಿದ್ದಾರೆ. ಸಾಮ್ಯವಾದದ ತೋರಿಕೆಗಳನ್ನು ಸ್ಪಷ್ಟಪಡಿಸಿ, ಹಿಂದೂ, ಯಹೂದ್ಯ ಕ್ರೈಸ್ತ ಮತ್ತು ತಾವೋ ಮುಂತಾದ ಧರ್ಮಗಳ ಆಂತರಿಕ ಅರ್ಥವನ್ನು ಸಂಶೋಧಿಸಿ ತೋರಿಸಿದ್ದಾರೆ. ಅಂಧಶ್ರದ್ಧೆ ಮತ್ತು ಸಂಕುಚಿತ ಭಿನ್ನತೆಗಳಿಂದ ಮೇಲೇರಿ ಮಾನವಸಮಾಜದ ಆಕಾಂಕ್ಷೆಗಳನ್ನೀಡೇರಿಸುವ ಹೊಸ ಮತಧರ್ಮವೊಂದನ್ನು ಈ ಶಾಶ್ವತ ಆಧ್ಯಾತ್ಮಿಕ ವಿಚಾರಧಾರೆಗಳಿಂದ ಹೇಗೆ ರೂಪಿಸಬಹುದು ಎಂಬುದನ್ನು ತೋರಿಸಿದ್ದಾರೆ.

**ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯ ಸಹಕಾರದಿಂದ ಪ್ರಕಟಿತ**

ಚೇತನ ಪುಸ್ತಕಾಲಯ

**ಮೈಸೂರು**